ಶ್ರೀರಸ್ತು.

ಜಯ ಶ್ರೀಕೃಷ್ಣ ಭಗವಾನ್

ಕರ್ಕೋಟಕಸ್ಯನಾಗಸ್ಯದಮಯಂತ್ಯನಳಸ್ಯಚ

ಋತುಪರ್ಣಸ್ಯರಾಜರ್ಷೇಃಕೀರ್ತನಂಕಲಿನಾಶನಂ

ಕಲಿಕಲ್ಮಷ ಹರವಾದ

# ಯಕ್ಷಗಾನ ನಳಚರಿತ್ರೆ.

ಎಂಬ ಈ ಗ್ರಂಥವು

ಸನ್ ೧೮೮೯ನೇ ಇಸವಿಯಲ್ಲಿ ಪ್ರಿಂಟಾದಪುಸ್ತಕದ

ಸಹಾಯದೊಂದಿಗೆ ಪಂಡಿತರಿಂದ

ಪರಿಶೋಧಿಸಲ್ಪಟ್ಟಿತು.

ರಂಗಸ್ವಾಮಯ್ಯಶೆಟ್ರ ಕುಮಾರರಾದ

ಎಂ. ಆರ್. ಕೃಷ್ಣಸ್ವಾಮಿ ಶೆಟ್ರಿಂದ

ಸ್ವಕೀಯ

ಶ್ರೀಕೃಷ್ಣವಿಲಾಸ ಮುದ್ರಾಕ್ಷರಶಾಲೆಯಲ್ಲಿ

ಮುದ್ರಿಸಿ ಪ್ರಕಟಿಸಲ್ಪಟ್ಟಿತು.

ಬೆಂಗಳೂರು ಸಿಟಿ.

ಕ್ರಯ ೮ ಆಣೆ.

೧೯೦೯



ಶ್ರೀರಸ್ತು.

# ಯಕ್ಷಗಾನ ನಳಚರಿತ್ರೆ

ದ್ವಿಪದೆ ॥ ಶ್ರೀಜಾನಕೀವಾಸಶುಭಗಿರೀವಾಸ । ಭಾನುಕೋಟಿಪ್ರಕಾಶ ಭಕ್ತಜನಪೋಷ । ಭಾಳನೇತ್ರನೆಸಖನೆಭಜಿರಕ್ಷಕನೇ । ಶ್ರೀಲಕ್ಷ್ಮೀವರನಾಥಶ್ರಿತಪಾರಿಜಾತ । ಸಕಲಲೋಕೇಶ್ವರನೆ ಶಂಕರಪ್ರಿಯನೆ ಕಮಲಜಾಸನಪಿತನೆಕಾರುಣ್ಯಮೂರ್ತಿ । ಅಮರರನುಕಾಯ್ದವನೆ ಅಸುರಮರ್ದನನನೆ । ಸುಮನಸಮನೋಲ್ಲಾಸಸುರುಚಿರವಿಲಾಸ । ಕರುಣಾಕಟಾಕ್ಷನೆಕಾಯೊಮುಂಡನ್ನ । ಅಧೈದುಸಲಕ್ಷ್ಮೈಯ್ಯಾಮಾರಪಿತ ಹರಿಯೆ ॥

ವಚನ ॥ಇಂತೆಂದು ತನ್ನಸ್ವಾಮಿಯಾದ ವೆಂಕಟೇಶ್ವರನಂಭಜಿಸಿ ಸರ್ವಲೋಕವಂದಿತೆಯಾದ । ಶ್ರೀಜಾನಕೀದೇವಿಯಂ ಯೇನೆಂದು ಕೊಂಡಾಡುತಿರ್ದಾನೊ ॥

ಜಂಪೆ ॥ ಕಮಲನಾಭನಸತಿಯೆ । ವಿಮಲಪುಣ್ಯಾಕೃತಿಯೆ । ಕುವಲಯಪ್ರಿಯಹಿತೆಯೆಕೋರ್ಮವಲ್ಲಭಯೆ ॥೧॥ ಅಜನಮಾತೆಯೆನೀನು ಭಜಕರಿಗೆವಂದಿತೆಯೆಸುಜನಸಂಪ್ರೀತೆಯೆ । ಸುಗುಣವತಿಹಿತೆಯೆ॥ ಶರಧಿರಾಜನಸುತೆಯೆ ಸುರಮುನಿಯವಂದಿತೆಯೆ । ಪರಮಪುಣ್ಯಾಕೃತಿಯೆ । ಕರುಣಗುಣಶ್ರುತಿಯೆ ॥೩॥ ಹರಿಗೆಪ್ರಿಯದಸಖಿಯೆ ಸುರರಾಜವಂದಿತೆಯೆ । ಪರಮಭಕ್ತರಮತಿಯೆ । ಶರಣುಹರಿಸತಿಯೆ ॥೪॥ ನಿಮ್ಮಸ್ತುತಿಸುವೆತಾಯಿ । ಯನ್ನರಕ್ಷಿಸಿಕಾಯೆ । ಇನ್ನುಮತಿಗಳನೀಯೆಯೇಣಾಕ್ಷಿಸಿರಿಯೆ ॥೫॥

ವಚನ ॥ ಇಂತೆಂದು ಲೋಕಮಾತೆಯಾದಂಥಾ ಲಕ್ಷ್ಮೀದೇವಿಯಂಭಜಿಸಿ ಭಕ್ತಜನಕ್ಕೆ ಮುಕ್ತಿಯನೀವ ಶ್ರೀಸದಾಶಿವನಂ ಏನೆಂದುಕೊಂಡಾಡುತಿರ್ದನೊ.

ತ್ರಿಪುಡೆ॥ ಸಕಲಲೋಕಾಜನರರಕ್ಷಿಪಸಾಂಬಶಿವನೇನಿಮ್ಮಯಕೃಪೆಯಪಾಲಿಸೆನ್ನನಲಹೊಪ್ರಕಟದಿಂದ ॥೧॥ ಸೋಮಶೇಖರನಾದದೇವನೆ । ಕಾಮಹರನೆಯನ್ನನು । ಪ್ರೇಮದಿಂದಲಿಸಲಹಿರಕ್ಷಿಸೊ

ಸ್ವಾಮಿಶಿವನೆ ॥೨॥ ಪನ್ನಗಾಧರನಾದಯಿಶ್ವರಯಿನ್ನು ನಿಮ್ಮಾಸ್ತುತಿಸುವೆ। ಮನ್ನಿಸೀಯಿಂದೆನ್ನ ರಕ್ಷಿಸೊ ಮಾರಹರನೆ ॥೩॥ ಮುದ್ದುಶಂಕರರುದ್ರದೇವನೆ। ಬುದ್ಧಿಯಿಂದಾಸ್ತುತಿಸುವೆ । ಸದ್ಯಾವರಗಳ ನಿತ್ತುರಕ್ಷಿಸೊ ಸಾಂಬಶಿವನೇ ॥೪॥ ಓನ್ನಮಃಶಿವಶರಣುಶಂಕರ। ಒನ್ನಮೋದುರಿತಾಂಧಭಾಸ್ಕರ । ಒನ್ನಮೋಶಿವಯೆನ್ನರಕ್ಷಿಸಿ ವರವನಿಯ್ಯೋ ॥೫॥

ವಚನ॥ ಇಂತೆಂದು ಸಕಲಲೋಕರಕ್ಷಕನಾದ ಸದಾಶಿವನಂ ಪೊಗಳಿಸರ್ವಲೋಕಮಾತೆಯಾದ ಪಾರ್ವತಾದೇವಿಯಂ ಯೇನೆಂದು ಕೊಂಡಾಡುತಿರ್ದನೊ.

ಯಕತಾಳ॥ ಇನ್ನು ನಿಮ್ಮನುಸ್ತುತಿಪೆ। ಚೆನ್ನಶಂಕರನಂಶಿವ ಯೆನ್ನರಕ್ಷಿಸಿಕಾಯೆಮನ್ನಿಸೀತಾಯೆ ॥೧॥ ಲೋಕದೊಳಗೆನಿಮ್ಮವಾಕ್ಯಾದಿಸ್ತುತಿಸುವೆ। ಸಾಕಾರದಿಂದೆನ್ನ ಸಲಹೆನ್ನತಾಯೆ ॥೨॥ ಸಕಲಭೂಷಣಪ್ರಿಯೆಸುಗುಣದಿಂದಲಿಕಾಯೆ । ಮುಗಿವೆನುನಿಮ್ಮಡಿಗೆ ಯಿಾಕ್ಷಣವೆತಾಯೆ ॥೩॥ ಇಂದುಧರನರಾಣಿವಂದಿಸಿಸ್ತುತಿಸುವೆ। ಕಂದುಗೊರಳನರಾಣಿಕರುಣದಿಂಕಾಯೆ ॥೪॥ ಧರಣಿಗಧಿಕವಾದಹಂದೇವನಾಪುರದ। ಧೀರಸೋಮೇಶ್ವರನದೇವಾನಸತಿಯೆ ॥೫॥

ವಚನ॥ಇಂತೆಂದು ಸರ್ವಲೋಕಮಾತೆಯಾದ ಪಾರ್ವತಾದೇವಿಯುಂಭಜಿಸಿ ಸರ್ವಶಾಸ್ತ್ರಕ್ಕೆ ನಿಪುಣನಾದಂಥಾ ವಿಘ್ನೇಶ್ವರನಂ ಭಜಿಸಿ ಯೇನೆಂದು ಕೊಂಡಾಡುತಿರ್ದನೊ.

ರಾಗ॥ದರು॥ ಶರಣುಶರಣುಶ್ರೀಗಣನಾಯಕ ॥ಶಿವ॥ ಶರಣುಶರಣು ಶ್ರೀಗಣನಾಯಕ॥ಶರಣು॥ಪಲ್ಲವಿ॥ ಕಂಡಾಸಕ್ಕರೆಕಬ್ಬು।ಪುಂಡಾಲಿಗೆಂಯರಾಶಿ। ಮಂಡೀಶಿಕೊಳಿತುಮೆಲ್ಲೊ ಶ್ರೀಗಣನಾಯಕ ॥೧॥ ವಡೆಯುಪರಮಾನ್ನಗಳು। ಸಡಗರದಿಂದಲಿ॥ಬೆಡಗಿನಿಂದಾಲಿಮೆಲ್ಲೊ ಗಣನಾಯಕ ॥೨॥ ಮೂಷಕವಾಹನನೆ । ಕಾಶಿವಾಸನಗುಣನೆ॥ದೋಷಾವಪರಿಹರಿಸೊ ಗಣನಾಯಕಾ ॥೩॥ ಮುದ್ದುಶ್ರೀಗಣನಾದಸ್ವಬುಯೆಗೆಯ್ಯೊ। ವಿದ್ಯಾವಕರುಣಿಸೈಯ್ಯ ಗಣನಾಯಕ ॥೪॥ ಧರಣಿಗಧಿಕವಾದಧೀರಹಂದೇನಪುರದಶೂರ । ಸೋಮೇಶ್ವರನಪುತ್ರಗಣನಾ

ಯಕೆ ॥೫॥

ವಚನ॥ ಇಂತೆಂದು ಗಣಾಧಿಪತಿಯಂ ಶರಣುಜನರಕ್ಷಕಿಯಾ
ದ ಶಾರದಾದೇವಿಯಂ ಯೇನೆಂದು ಕೊಂಡಾಡುತಿರ್ದನೊ.

ಜಂಪೆ॥ ಶರಣುಜನಿಗೆರಾಣಿಪರಮಗುಣಕಲ್ಯಾಣಿ । ಸುರರು
ನರರಿಗೆಪ್ರಾಣಿಸುಗುಣಪ್ರವೀಣೆ ॥೧॥ ಪಿಡಿದಪುಸ್ತಕಧಾರಿಕಡುಸೊಗ
ಸುಶೃಂಗಾರಿ । ಬಿಡುರತ್ನದೊಯ್ಯಾರಿಕಡುಚೆಲ್ವನಾರಿ ॥೨॥ ಮಾತೆ
ಯನ್ನಯಹೃದಯನೇತ್ರದೊಳುನೀನೆಲಸಿ । ಪ್ರೀತಿಯಿಂವಿದ್ಯಗಳ
ನೀತಿಗಳನಿಯ್ಯೆ ॥೩॥ ಯಿಂತೆರದಿಸ್ತುತಿಸುವೆನುಮಾತೆನಿಮ್ಮಡಿಗ
ಳನು ನೀತಿಶಾಸ್ತ್ರಾಗಮವನೀಕರುಣಿಸಮ್ಮಾ ॥೪॥

ವಚನ॥ ಇಂತೆಂದು ಶಾರದಾದೇವಿಯಂ ಭಜಿಸಿ ದೇವಕವಿಗಳಂ
ಯೇನೆಂದು ಕೊಂಡಾಡುತಿರ್ದನು.

ಯಕತಾಳ॥ ಅರ್ಧನಾರೀಶಶೇಷವಾಲ್ಮೀಕಿಯನುಲೇಸಾಗಿಭಜಿಸಿ
॥೧॥ವ್ಯಾಸಶುಕಾಖ್ಯನವಿವರದಿಂಪೊಗಳಿ॥೨॥ಧರೆಯೊಳುಮೆರೆವಂತಾದ
ವರವಿದ್ಯಾಕವಿಗೆ ॥೩॥ ಪರಮಗನಕರಂಬಕಾಳಿದಾಸನಿಗೆ ॥೪॥ ಯರ
ಗಿಯಲ್ಲಾರಪದಕಮಲಾರಪದಕಮಲಾವನೆನದು ॥೫॥ ಮುದದಿಂದ
ಮುಂದಣಕಥೆಯಹೇಳುವೆನು ॥೬॥ ಸಕಲಜನರುನೀವುಸಂತಸದಿ
ಕೇಳಿ ॥೭॥ ಕಂದಪದ್ಯಾಧರೆಯೊಳಗಿರುವರುಜಾಣರು । ನರನಕೃತಿ
ಯಂಪೇಳ್ವೆದೆಂದುಮನಿಂದ್ಯವಮಾಡದೆ । ಹರಿಯುಮಂಶಿಷ್ಯನಾದನಳ
ಕಥೆಯನುಪೇಳ್ವೆಲಾಲಿಶಿರಸಿಕರು ॥೧॥ ಸಕ್ಕರೆಯುಜೇನುಸವಿಪೋಲ್
ಕಕ್ಕಸಕುಚವುಳ್ಳಕಾಂತೆಕಂಗೊಳಸುವಪೋಲ್ । ನಳಕಥೆಯುಯಕ್ಷ
ಗಾನದಿ । ಯಿಕ್ಷಿತಿಯೊಳುಸಕಲಜನರುಲಾಲಿಸಿಕೇಳ್ವುದು ॥೨॥

ರಾಗ॥ಕಾಂಭೋಧಿ ॥ಶೃಂಗಾರದಿಂದಕೇಳಿರೊ । ಈಕಥೆಯನು
ಅಂಗಶುಚಿಯೊಳೆಲ್ಲಾರು ॥ಮಂಗಳಾತ್ಮಕನಾದಹರಿಯುಭಕ್ತನಳಚಕ್ರ
ವರ್ತಿನಾಭಂಗಪಟ್ಟಂಥಕಥೆಯಸಂಗತಿಯಿಂದಾಕೇಳಿರೊ ॥೧॥ಯುಕ್ತಿ
ಭಾವಂಗಳಿಂದಲಿ । ಸರ್ವಜನರುಭಕ್ತಿಯಿಂದಲಿಕೇಳಿರೊ । ಭಕ್ತಿಮು
ಕ್ತಿಗಳನ್ನುಭಕ್ತಿಭಾವವನೋಡಿ॥ ಶಂಕೆಯಿಲ್ಲದಕೊಳುವಬಂಕದಿಂದಾ
ಲೆಹರಿಯು ॥ ಶೃಂಗಾರ ॥ ೨ ॥ ಸ್ನಾನಮುಡಿಗಳಿಂದಲೀನೀವೆಲ್ಲರ...

ಯಪೂಜೆಮಾಡಿನೀವೆಲ್ಲರುಭಕ್ತಿಭಾವಗಳಿಂದಾಲೀ । ಮಾನವಧೀಶ ನಾದನಳಚಕ್ರವರ್ತಿ ಕಥೆಯಾವಿನಯಾದಿಂಕೇಳ್ದರೆ । ಮನೋಹರು ಷದಿಂದಲೀ ॥ಶೃಂ॥೩॥ ಧೂಪದೀಪಂಗಳಿಂದಲೆ । ಪೂಜೆಯಮಾಡಿ । ಪಾಪಾವುಕಳದುಕೊಳ್ಳಿರೊ ಶ್ರೀಪತಿಭಕ್ತನಾದನಳಚಕ್ರವರ್ತಿಕಥೆ ಯು । ಕೇಳಿಪಾಪವೆಲ್ಲವುಕಳದುಕಾಪಾಡುವಹರಿಯು । ಶೃಂಗಾರದಿಂ ದಕೇಳಿರೊ ॥೪॥ ಕಾಣಿಕೆಯನ್ನು ಮಡಗಿ।ಸರ್ವಜನರುವಾಣಿಯಪೂಜೆ ಮಾಡಿ । ಕ್ಷೋಣಿಗೊಡೆಯನಾದ । ನಳಚಕ್ರವರ್ತಿಕಥೆಯಜ್ಞಾನ ದಿಂಕೇಳಿದರೆಮರಿತಪಾಪಗಳಿಲ್ಲಾ ॥ಶೃಂಗಾರ॥೫॥

ವಚನ॥ ಇಂತೆಂದು ಮುಂದೆನಡೆವಂಥಾ ಕಥೆಯನ್ನು ವಿಸ್ತಾ ರವಾಗಿ ಸರ್ವಜನರುಕೇಳುವಂತೆ ಹೇಳ್ವೆನದೆಂತೆನೆ

ದ್ವಿಪದೆ॥ ಈಕಥೆಯಲೋಕದೊಳಗೇಕಮನಶಿನಲಿ। ಸಾಕಾರ ದಿಂಕೇಳ್ದಸರ್ವಜನಗಳಿಗೆ । ಬೇಕಾದಸಂಪದವುಸಕಲಭಾಗ್ಯವನು । ಹರಿಕೊಡುವಯಿಾಕಥೆಯಬರದಿವ್ರೋದಿದರೆ । ಪರಮಪದವಿಯಕೊ ಟ್ಟುಹರಿಯುಮನ್ನಿಸುವ ॥ ಸರ್ವಗ್ರಹಗಳುಸಕಲಪರಿಹರವು । ಪೃ ರ್ಥ್ವಿಯೊಳ್ಕೇಳದವುತ್ತಮಜನಕೆ । ಶಾರಲಮ್ಮನುಶನಿಯುಸಾರಹೃ ದಯಳಿಗೆ । ಮಾರಪಿತನುಪೊಗಳಿಮತ್ತೆಯಿಾಕಥೆಯು । ಧಾರುಣಿ ಯಜನಕೆವಿಸ್ತರವಾಗಿಪೇಳ್ವೆ ॥

ವ॥ ಇಂತು ದ್ವಾಪರಯುಗದಲ್ಲಿ ಧರ್ಮರಾಯನು ದುರ್ಯೋಧ ನನಕೊಡ ಜೂಜವನ್ನಾಡಿ ಸಕಲ ಸಾಂಬ್ರಾಜ್ಯವಂ ಸೋತು ಸ ಹೋದರರು ಸಹಿತವಾಗಿ ಅರಣ್ಯವಂಸೇರಿ ವನವಾಸವಂಮಾಡುತ್ತಿ ರಲು ಅಲ್ಲಿಗೆ ಬೃಹದಾಶ್ವ ಮುನಿಶ್ವರರು ತಮ್ಮಶಿಷ್ಯರುಸಹಿತವಾಗಿ ಬಿಜಯಂಗೈದರದೆಂತೆನೆ.

ಜಂಪೆ॥ ಘನವಾದಜಡೆಗಳುವಿನಯದಿಂದಲಿಕಟ್ಟಿ ಅನುವಾದ ವಿಭೂತಿರನುವಿನೊಳ್ಧರಿಸಿ ॥೧॥ ರುದ್ರಾಕ್ಷಿಸರಗಳನುರೂಢಿಯಿಂ ದಲಿಕಟ್ಟಿ । ಭದ್ರಕೃಷ್ಣಾಜನವುಭರದಿಂದಕಟ್ಟಿ ॥೨॥ ಕರದೊಳಗೆಜಪ ಮಾಲೆಭರವನದಿತಾಪಿಡಿದು ।ಹರುಷದಿಂಬೃಹದ್ವಾಸವರಮುನಿಂದು ದಯದೀ ॥೩॥ ಪರಿಜಾರಗಳಮಾಳ್ವಪರಮುನಿಗಳುಸಹಿತ । ಧೊರಧ

ಮೆ-ರಾಯಯಮರಾಗಿಬರಲೂ ॥ ಅನುಜರೊಸಹವಾಗಿಮುನಿಯ ಪಾದಕೆನಮಿಸಿ । ಘನಭಕ್ತಿಯಿಂದಬಿಜಯಂಗೈಸಿತೆರಲೂ ॥೫॥ ಪರಮರುಷಿಹರುಷದೊಳುಕರುಣದಿಂದಿರುತಿರಲು । ಅನುಜರನುಸಹವಾಗಿಕೈಕಟ್ಟನಿಲಲೂ॥

ವ॥ ಆಸಮಯದಲ್ಲಿ ಬೃಹದಾಶ್ವಮುನಿಯು ಧರ್ಮರಾಯನಂ ನೋಡಿ ಪರಿಣಾಮವೆಯೆಂದು ಬೆಸಗೊಳ್ಳಲು ಧರ್ಮರಾಯನು ಪ್ರತಿಬಿನ್ನಹವಂಮಾಡುತಿರ್ದನಂತೆನೆ.

ಯಕತಾಳ॥ ನಮ್ಮಪೂರ್ವೋತ್ತರನಿಮ್ಮೊಳುಪೇಳುವೆ।ಸಮ್ಮತಿಯಿಂದರಿಸಕಲಾವೆಲ್ಲವನೂ ॥೧॥ ಕೌರವೇಶ್ವರಯನ್ನಸಕಲಭಾಗ್ಯವನೆಲ್ಲ । ಪೃಥ್ವಿಯೊಳಗೆಕೊಂಡನೃಪ್ವೇಶಕೇಳೂ ॥೨॥ ಹೋಗಿನ್ನುಆವನೊಳುಹೋರಾಟವೇಕೆಂದು । ಸರ್ವಭಾಗ್ಯವನೆಲ್ಲತೊರದಿನ್ನುಬಂದು ಅನುಜಾರುಸತಿಸಹಾಅಡವಿಯೊಳಗೆಸೇರಿ । ಕಡುಕಷ್ಟಪಡುವಂಥ ನುಡಿಗಾಳುಕೇಳು ॥ ಅರಣ್ಯದೊಳುನಾವುಹಣ್ಣುಹಂಪಲವೆಮ್ದ್ಬು । ಪೂರ್ವಜನ್ಮಾದಫಲದಿಸೇರಿರ್ಪೆವ್ನೈಯ್ಯಾ ॥

ವ ॥ ಇಂತೆಂದು ಧರ್ಮರಾಯನು ಮತ್ತಿಂತೆಂದನು ॥ಕಂ॥ ಹಣ್ಣುಕಾಯಿಗಳವೆಲ್ಲುತ। ಪುಣ್ಯವದಕನ್ನವಿಲ್ಲಪಿನೀಕಷ್ಟಪಡುವೆವು ಚಿನ್ಮಯಮುನಿಯಮುದ್ದೇವರನೀಕೇಳುಬಿನ್ನಹಮಾಳ್ಪೆನೂ॥

ಸೀ ॥ ಮಳೆಛಳಿಯಬಿಸಲೊಳಗೆವಳವಾಗಿನಾವಿನ್ನುಬೀಳಬಾರದಕಷ್ಟಬೀಳುತಿರುವೆವು । ದೃಪದನಂದನೆಪಡುವಪಾಡುಗಳನೋಡಿನ್ನು । ಅಪರಿಮಿತಚಿಂತೆಯಲಿಕೊರಗುತಿಹೆನು ॥ ಎನ್ನಸೋದರರುವುನ್ನತಪರಾಕ್ರಮರು । ಇನ್ನಿವರನೋಡಿನ್ನುಕರಗುತಿಹೆನುಇಂತು ನಾನಾಬಗೆಯಚಿಂತೆಗಳನಂಗ್ರಹಿಸಿ । ಪಂಥಗಳಬಿಟ್ಟೆನ್ನುಕರಗುತಿಹೆನು । ಕಟಕಟಾದಯವಿಲ್ಲದೆಕೌರವಾಧೀಶ ।ಮಟಮಾಯದಿಂದಮತ್ತೆಜೂಜವನಾಡೆ । ಆಕಳಂಕದಿಂದರಿಸಕಲಭಾಗ್ಯಗಳನ್ನುಕಳದುಕೊಂಡಾ ।

ವ॥ ಇಂತು ಪೇಳಿದಧರ್ಮರಾಯನೊಡನೆ ಬೃಹದಾಶ್ವಮುನೀಶ್ವರನು ಯೇನನ್ನುತಿರ್ದನು.

ಜಂಪೆ॥ ನೀನುಕೇಳ್ಭೂಪಯೇನು ಕಷ್ಟವುಬರಲುಜ್ಞಾನದೊಳುಚಿಂತಿಸಲುತಾನಿದೇಹಕ್ಕೆ ॥೧॥ ಪೂರ್ವಜನ್ಮಾಂತರದಿಶೇರಿದಕರ್ಮಗಳು । ವಿಾರಲಳವೇಹರಿಯುಅಜರಿಗಾದಡೆಂಯು ॥೨॥ ಕೆಲವುದಿನಸಂಪದವುಕೆಲವುದಿನಕಷ್ಟಗಳು ।ಯರಡುದ್ವಂದ್ವಗಳಾಗಿಇರುತಿಹವುಪ್ರಜೆಗೆ ॥೩॥ ಇದಕಿನ್ನುಮಿಂಚಾಗಿಯೇನುಕಷ್ಟವುಬರಲುಮದನಜನಕನಧ್ಯಾನವಮರೆಯದಿರುನೀನು ॥೪॥ ಯೆಂದುಮುನಿಪೇಳಿದರೆಸಂದೇಹಗೊಂಡಿನ್ನು । ಮುಂದಿನ್ನುಮುನಿಗೆಮತ್ತೊಂದುಪೇಳಿದನೂ ॥

ವ॥ ಬೃಹದಾಶ್ವಮುನೀಶ್ವರರಕೊಡೆ ಧರ್ಮರಾಯನು ಮತ್ತಿಂತೆಂದನು.

ಯಾಲಪದ॥ ಸ್ವಾಮಿಮುನಿಯೇನೀವೂಕೇಳಿಭೂಮಿಯೊಳಗೆಬಾಳೂವಂತಾ ಕ್ಷೇಮವೆಲ್ಲಾನಾನೂಹೇಳ್ವೇನೂ । ವೋಮುನಿನಾಥಾಪುತ್ರನೀವೂಇನ್ನೂಲಾಲಿಸಿ ॥೧॥ ಪಟ್ಟೇಮಂಚಸುಪ್ಪಾತ್ರೀಗೆಅಷ್ಟಮಹಾದೈಶ್ವರ್ಯಾವನ್ನೂ ॥ ಇಷ್ಟುಪದವೀಯಾನುಬಿಟ್ಟನ್ನೂ । ವೋಮುನೀನಾಥಾ । ಕಷ್ಟಪಡುವೋಕಾಲಾವಾಯಿತಾತೊ ॥೨॥ ವುಂಡಾಲಿಲ್ಲಾಹೊದೆಯಾಲಿಲ್ಲ । ಅನ್ನವಸ್ತ್ರಾವೊಂದಲೀಯಿಲ್ಲಾ ಸಂಣಬಣ್ಣಾಬಿಳಿದುವೊಂದಿಲ್ಲ ವೋಮುನೀನಾಥ ಕಣ್ಣುಗೆಟ್ಟುಕರಗುವಂತಾಯ್ತು ಕಲ್ಲೂಮುಳ್ಳುಗಾಳೊಳಗೆ । ಹಳ್ಳಗಾಳಸುತ್ತಿನಾವು ಯಿಲ್ಲಿಕಷ್ಟಾಪಡುತಲಿರ್ಪೆವು । ವೋಮುನೀನಾಥಾನಿಲ್ಲಲಾರದೆನಾವುಕರಗುವೆವು ಯಲ್ಲಾಯುಗಾಗಾಳನಡತೆ ಬಲ್ಲಂತಾಪ್ರಭುಗಾಳುನೀವು ಇಲ್ಲವೇನ್ನೈಕಷ್ಟಪಟ್ಟವರು । ವೋಮುನೀನಾಥಾ ಯಲ್ಲವನ್ನೂನೀವೂಹೇಳ್ಬೇಡು ॥೫॥ರಂದಮಾತೂಕೇಳಿಮುನಿಯುಸಂದೇಹಗಳಾಬಿಟ್ಟೂತಾನು । ಮುಂದಣಕಥೆಯಂಪೇಳ್ದನು ।ಧರ್ಮರಾಯರಿಗೆಹಿಂದಣಯಾಗಾದನಡತೆಯಾ ॥೬॥ ಕೃತಯುಗಾದೊಳಗೆವಬ್ಬಾನಳಚಕ್ರವರ್ತಿಯೆಂಬುವನು ಅತಿಶಯಾದೀರಾಜ್ಯವತಾನಾಳಿ । ಪರಚಕ್ರದಿಕಷ್ಟಪಡುವಕಥೆಯಾಕೇಳಿನ್ನೂ ॥

ವ॥ ಇಂತೆಂದು ಬೃಹದಾಶ್ವಮುನೀಶ್ವರನು ಕೃತಯುಗದೊ

ಳಿಗಾದ ನಳಚರಿತ್ರೆಯನ್ನು ದ್ವಾಪರಯುಗದಲ್ಲಿ ಧರ್ಮರಾಯನಿಗೆ ಹೇಳುತಿರ್ದನದೆಂತೆನೆ.

ದ್ವಿಪದೆ॥ ಶ್ರೀಕರನಪಹೇಮಚಿತ್ರವಾದಂಥ । ಪ್ರಾಕಾರಗೋಪುರಪ್ರತಿಸೂರ್‍ಯರಂತೆ । ಕನಕರತ್ನಪ್ರಭೆಯುಕಾಂತಿಕೋಟಿಗಳು । ತೆನೆಗಳೊಪ್ಪಿದಮುತ್ತವಜ್ರಬೀದಿಗಳು ನೀಲದಾಳ್ವೇರಿಯುನಿಜಪಸೌಪಾನ । ಮೇಲುಪಚ್ಚೆಯುಪ್ಪರಿಗೆಮೆರೆವುದಕಾಂತಿವಾಲಗಪಹಜಾರವನ್ನುವಪ್ಪುತಲಿ । ಕೇಳಿಗೃಹಂಗಳುಯುಪ್ಪರಿಗೆಯುಬಹುಚಿತ್ರಗಳಿಂದಪ್ರೊಳಿವಅರಮನೆಯು । ಶೃಂಗರದವನಗಳುಕಬ್ಬುತೋಟಗಳು । ಅಂಗನೆಯರೆಸದಿರ್ಪಅತಿಚಂದ್ರಶಾಲೆ । ರಂಗುವಿಹಾರಿದರಜಿತಶೈಲಗಳುಚಂಗಾವಿಟಕ್ಕೆಗಳ್ವೈಚಿತ್ರದಿಂಮೆರೆಯೆ । ವೇದಶಾಸ್ತ್ರಪುರಾಣವಿದ್ಯೆಗಳನೆಲ್ಲ । ಆದಿಗಳವರ್ನಿಸುವರಖಿಭೂಸುರರು । ರಾಜಪುರುಷರುರಣಪರಾಕ್ರಮರು । ರಾಹುತರುಭೋಜನರುಪೊಗಳುತಬಂದರು ಬಾಂಧವರುನಿನ್ನ ಪಟ್ಟಣಕ್ಕೆವುನ್ನತವಾದಪುರವು । ಪನ್ನಗಶಯನಭಕ್ತಿಯಿಂನಡೆವ । ವುನ್ನತವಾದಪುರಜನರುಮನೆಯೊಳಿಹರು । ನರಸಸತ್ಕವೀಶ್ವರರುಪಾಠಕರು । ಕಾಮಿತಾರ್ಥಗಳೆಲ್ಲಕೇಳದರ್ಗೀವ । ಭೂಮಿಯೊಳಗುಂಟಾದಸರುಕೆಅಂಗಡಿಯು ॥ ಶೃಂಗಾರವುಳ್ಳಂಥ ಅಂಗಜಗೆಮಿಗಿಲಾದ । ಅತಿಸೊಬಗಿನಿಂದಶೃಂಗರದಪುರುಷರುಸೊಬಗಿನಿಂದೆಸೆಯೆ । ಮದಗಜಂಗಳನೆಲ್ಲಮರ್ದಿಸುವ । ಬಹುಮಲ್ಲಜನರುಕರಿತುರಗಕಾಲಾಳು । ತರತರದೊಳಿರಲುಪುರುಹೂತನಾಳಿದ । ವುರವೊಯನಲ್ಕೆಧರಣಿದೇವಿಗೆಮುಖದರ್ಪಣಗಳಂತೆ । ಘನತರದಿಯಸಮಂತೆಆನಿಷಪುರವೊ ॥

ವ॥ ಇಂತು ಬೃಹದಾಶ್ಯಮುನೀಶ್ವರನು ನೇರಾಜನು ಆಳುವಂಥಾ ನಿಷಧಾಪುರದ ವಿಸ್ತಾರವಂ ಹೇಳುತಿರ್ದನದೆಂತೆನೆ.

ತ್ರಿಪುಡೆ॥ ಆಪುರಾಧೀಶ್ವರನುತಾನಿನ್ನಯುಸಮಾನನಾಗೀಯಿರುತಿರೆ । ಭೂವರಿಗೆಸರ್ವರಿಗೆತಾಕಂಠೀರನಾಗೀ ॥೧॥ ಲೋಕದೊಳುನಳರಾಜನೆನುತಲಿಯೇಕಚಕ್ರದಿಆಳುತಿರ್ದನು । ಶ್ರೀಧರನಕೃಪೆಯಿಂದ ತಾನೀಮೇದಿನಿಯನೂ ॥೨॥ ಆಅರಸಧರೆಯಾಳುತಿರ್ದನುಹೀಮೆಯ

ಲ್ಲಾಯೇಕಚಕ್ರಾಧಿಭೂಮಿಪತಿ ಕೇಳಿನ್ನು ನೀನತಿಪ್ರೇಮದಿಂದಾ ॥೩॥ ಧರಣಿಯೊಳು ಷೋಡಶಮಹಾದಾತೆಗಳರ್ನೆ ಡೆನುತಾ ಪ್ರೊಢವಿಪತಿ ತಾನಾಳುತಿರ್ದನು ಕಡು ಪರಾಕ್ರಮದೀ ॥೪॥ ಗುರುಭಕ್ತಿಯುತನಾ ಗಿಗುಣಶಾರದನೆನಿಸಿ । ಅವನಿಯ ಪುರುಷದಿಂದರ ಆಳುತಿರ್ದ ನುಜನಪ ಕೇಳ್ಮ ॥

ವ॥ ಇಂತೆಂದು ಋಷೀಶ್ವರನು ಮತ್ತಿಂತೆಂದನು.

ಜಂಪೆ॥ ವೀರಸೇನನೆನುತನುಧಾರುಣಿಯನಾಳಿದನು । ಧೀರ ತ್ವದಿಂದಗಾಂಭೀರ್ಯದಿಂದಾಗ ॥೧॥ ಯೇಳುಸಮುದ್ರವನುಯೇಕ ಚಕ್ರದೊಳಾಗ ॥ ಜೋಕೆಯಿಂದಿರುತಿರ್ದ ಭೂಪತಿಯೆ ಕೇಳು ॥೨॥ ಅರವಿಂದವದನೆದಮಯಂತಿ ಆತನರಾಣಿ । ಪರಮಪತಿವ್ರತೆಕೇಳು ಗುಣಶಿರೋಮಣಿಯೂ ॥೩॥ ವನಿತೆಯರಕುಲಕಿನ್ನು ಕನಕವೆಂದೆನಿ ಸುತಿಹ ॥ ಘನವಾದಕಾಮಿನಿಯು ಅನುಕೂಲದೊಳಿಹಳೂ ॥೪॥ ಇಂ ತಾಳುತೊಂದುದಿನಸಂತೋಷದೊಳು ಇರಲು । ಅಂತಾಗ ದಾಯಾದ್ಯ ನಾದಪುಷ್ಕರನೂ ॥೫॥ ಬಂದು ಪಗಡೆಯನಾಡಿ ಅಂದಾಗ ಸಕಲವನು ಚಂದದಿಂದಲಿ ಸೋತು ಅಂದು ಪುಷ್ಕರಗೆ ॥೬॥ ಅನ್ಯಾಯ ಜೂಜವನು ಆ ಡಿ ಆತನ ಕೊಡೆ । ತನ್ನ ಭಾಗ್ಯವನೆಲ್ಲಿ ಪುಷ್ಕರನಿಗಿತ್ತು ॥

ವ॥ ಇಂತೆಂದು ಆ ಋಷೀಶ್ವರನು ಮತ್ತೇನನ್ನುತಿರ್ದಾನು,

ರಾಗ॥ ಸೌಭಗಿನೆಸೌವರ್ನ ಸಾಂಗತ್ಯ ॥ ಭೂಮಿಶೀಮೆಯ ಬಿ ಟ್ಟು ಮಂದಿಮಾರ್ಬಲ ಬಿಟ್ಟು । ಆ ಮಹಾರಣ್ಯಕೆ ತೆರಳುತಲಿ ॥೧॥ ಧನ ವು ಧಾನ್ಯವು ಬಿಟ್ಟು ಕನಕಭರಣವು ಬಿಟ್ಟು । ಘನವಾದ ಮಂತ್ರಿ ಸಾಮಾ ನ್ಯರ ಬಿಟ್ಟು ॥ ಆರಣ್ಯ ಭೂಮಿಗೆ ಅವರು ವಕ್ಕಲು ಹೋಗಿ । ವಾರಿ ಜಾಕ್ಷಿಯನೊಡಗೂಂಡು ತಾವೂ ॥೩॥ ಅನ್ನಹಾರವು ಮೂರುದಿವಸತ ಮಗಿಲ್ಲದೆ ॥ ಹೊದ್ದ ಬಟ್ಟೆಯ ಪಕ್ಷಿಗೆ ಕೊಟ್ಟು ॥ ಕೆಟ್ಟುವರೆ ಅರಿವಿಲ್ಲ ಕಾಂತೆಶೀರೆಯ ಶಿರಗೆ ಕಟ್ಟಿ ತಾನತಿದುಃಖದೊಳಗೆ ॥೫॥ ಅನ್ನಾವ ಕಾಣ ದೆ ಹಸಿದು ಬಳಲೀ ತಾವು । ಹಣ್ಣುಕಾಯಿಗಳ ತಿನ್ನುತಲಿ ॥೬॥ ಶನಿರಾಜ ಮಾಡಿದ ಘನಮಾಯದಿಂದಲಿ । ಯಿಬ್ಬರು ಯರಡುದಾರಿಗಳಾಗಿ ॥೭॥ ತರಳಾಕ್ಷಿ ಕಾಣದೇ ಧರಣೀಶ ಚಿಂತಿಸಿ । ದರಣೀಶನ ಕಾಣದೆ ತರಳಾಕ್ಷಿ ॥೮॥

ತಮ್ಮತಮ್ಮಚಾಕರಿಯನ್ನುಮಾಡಿದನೃಪಗೆ । ತಾವುಚಾಕರಿಯ
ಮಾಡಿದರುಈಮೇರೆಕಷ್ಟಾದಿಕೆಲವುದಿವಸವಿದ್ದು । ಕಾಮಪಿತನಕ
ರುಣಗಳಿಂದ ॥೧೦॥ ಎಂದಿನಂದದಿರಾಜ್ಯವಂದಾದಿಂದಾಳಿಇಳೆಯಿಂ
ದುಧರನಕರುಣದಿಬಾಳಿ ॥೧೧॥ ಯೆಂದವಮಾತನುಕೇಳಿಧರ್ಮರಾಯ
ನುತಾಕೇಳಿವಂದಾರುಭುಜವಾಗಿಭಕ್ತಿಯಲಿ ॥೧೨॥ವ॥ ಇಂತೆಂದುಧ
ರ್ಮರಾಯರು ಮತ್ತಿಂತೆಂದರು

ಕಂ ॥ ಇಂದುಧರರಾಪುಮುನಿಪಗೆ। ಮುಂದಣಕಥೆಯನ್ನು ಸ
ಕಲವಿಸ್ತರದಿಂದಲಿ । ಮುನ್ನುಬಾಳಿದುದನ್ನೆಲ್ಲವ । ವುನ್ನತದಿಯನ
ಗೆಪೇಳಿಮನ್ನಣೆಯಿಂದಲಿ ॥ವ॥ ಇಂತುಸಂತೋಷವಂಬಟ್ಟುಕೇಳಿದ
ಧರ್ಮರಾಯರಿಗೆ ಬೃಹದಾಶ್ವಮುನಿಯೇನೆನ್ನುತ್ತಿರ್ದಾನು.

ದ್ವಿಪದ ॥ ಕೇಳುಧರ್ಮಜನೀನು ಪೇಳುವೆನುನಾನು ಯಿಳೆಯೊಳಗೆ
ಯಿರುವನಿಷಧಪಟ್ಟಣವುಅದರವಿಸ್ತಾರವಂಪೇಳ್ವೆನಾನು । ಮು
ದದಿಂದನೀಕೇಳುಚತುರತನದಿಂದಾ । ಕನಕರತ್ನಪ್ರಭೆಯುಕಾಂತಿ
ಕೋಟೆಗಳು । ಘನವಾದಗೋಪುರವುಅನುವುಸನೆನೆಯು। ತೆನೆಗಳೊ
ಪ್ಪಿದಮುತ್ತುವಜ್ರಬೀದಿಗಳು । ನೀಲದಾಳ್ವೆಖಚಿತಸೋಪಾನವೋ
ಲುಪಚ್ಚೆಯುಪಂಕೆಮೆರವುದತಿಕಾಂತಿ । ಪರಸಗ್ಗೋಪೋಧಿಕದಸಾಲು
ಕೊತ್ತಳದತರತರದಲೋವೆಗಳುತಳಕಾವೇರುಹೊಂಬಳಿಪಟ್ಟದಿಡ್ಡಿ
ಪವಳದಬಾಗಿಲುಗಳು । ಥಳಥಳಿಪಮಾಣಿಕ್ಯಕದವಾಟಗಳು ।ಅಮರ
ಪುರವಕಿಸುವಅಟ್ಟಣೆಗಳಿಂದ । ಕ್ರಮದಡೆಂಕಣಿಕೋಟೆಗೋಪುರಗ
ಳಿಂದ। ಆಶ್ಚರ್ಯವಾದಂಥಅರಮನೆಗಳಿಂದ । ಅಮಿತಅರ್ಥಿಯುಚಂ
ದ್ರಶಾಲೆಗಳಿಂದಬಿಂಕದಿಂದೆಸೆವಬೃಂದಾವನಗಳಿಂದ । ಚಂದದಂಗ
ಡಿಸಾಲುವಾಳಿಗೆಯಿಂದಬಂಧುರದಬಹುಚೋದ್ಯ ।ಭಾವಂಗಳಿಂದ
ವೇದಶಾಸ್ತ್ರಪುರಾಣವೋದುವವರಿಂದ । ಮಾಧವಸ್ತುತಿವಾಳ್ವಭ
ಕ್ತರುಗಳಿಂದ । ಸತ್ಯಗೀತಾಳನೂತನಗಳಿಂದಜಾತಿಯುತ್ತಮಪು
ರುಷಜನಸತಿಯರಿಂದಮಾತುತಪ್ಪದೆಮಧುರಭಾಷೆಯರಿಂದ । ಖ್ಯಾ
ತಿಸುವಕಾಲಾಳುಕರಿತುರಗಗಳಿಂದ। ರಥಸುಭಟರಿಂದರಾಜಿಸುವರಸು
ಗಳಿಂದಾ । ಮತಿಯುಳ್ಳಮಾತುಗಳಮಂತ್ರಿಯರಿಂದ ॥ ಪ್ರತಿವಾ

ದ್ಯವ್ರೋಕ್ಷಣಿಕೌಜುಗಳಿಂದ ಕವಿಬೇರ್ಗಾಯಕರುಕ್ತೈವಾರಗಳಿಂದ ಅವನೀಶವೀರಸೇನನಸುತನು ನಳರಾಜನೆಂಬುವನುನರನಾಥಕೇಳು ಅತಿಭಕ್ತಿಯಿಂದದಮಯಂತಿಸಹವಾಗಿ । ಏಕಚಕ್ರವನಿಆಳುತಿರ್ದ ನುಅತಿಹರುಷದಿಂದಾ

ವ ॥ ಇಂತುಸಕಲ ರಾಜ್ಯವಂ ನಳಚಕ್ರವರ್ತಿಯು ಯೇಕಚಕ್ರ ವನ್ನಾಳುತ್ತಿರ್ದನದೆಂತನೆ

ಜಂಪೆ॥ ಆಅರಸುಅವನಿಯನುಆಳುವದಿವಸದೊಳು । ಮೂರುಮ ಳೆತಿಂಗಳಿಗೆನಡಸುತ್ತಲಿರಲು ॥೧॥ ಆಚಾರದಲಿನಡೆವರಾಸರ್ವಜನರೆ ಲ್ಲ । ಅನಾಚಾರವೆಂಬುವದುಅರಸಿದರುಯಿಲ್ಲಾ ॥೨॥ ಸರ್ವಜನರುಗಳೆ ಲ್ಲಸಕಲಭಾಗ್ಯದೊಳಿರಲು । ಬಡವರಾಗಿರುವರತಡಕಿದರುಯಿಲ್ಲಾ ॥ ಮದನನಿಗೆಮಿಂಚಾಗಿಪುರುಷರಿಲ್ಲದೆಮತ್ತೆ । ಹೃದಯಹೀನರುಯಿಲ್ಲ ನದನದೊಳುನೋಡೆ ॥೪॥ ಆದಿಲಕ್ಷ್ಮಿಯುಪ್ರೋಲ್ವಅಂಗನೆಯರಲ್ಲದೇ ಮೇದಿನಿಯುಸ್ತ್ರೀರೊಳುಮತ್ತೆಬೀಳಿಲ್ಲಾ ॥೫॥ನೂರುಹೊನ್ನಿಗೆಯಿನ್ನು ವಂದುಹಣಬಡ್ಡಿಗಳು । ಶೇರಿನಡೆಯುವದವನಭೀಮಿಯೊಳಗೆಲ್ಲಾ ॥೬ ಇಂತುರೈತರುಯಿಲ್ಲಬಿತ್ತಿಬೆಳೆದಾಧಾನ್ಯ । ಹತ್ತುಹಾಲಿಗೆವಂದು ಹಾಲುಕೊಡುತಿಹರು ॥೭॥ ಒಂದುಕೆಂಡುಗದವಸವಂದುಹಣವಿಗೆ ಮಾರ । ಚಂದದಿಂದಿರುತಿಹರುಸಕಲಜನರೆಲ್ಲಾ ॥ ೮ ॥ ಇಂತಿ ವನಶೀಮೆಯಲಿಸಂತೋಷದಿಂದೆಲ್ಲ ॥ ಅನಂತಐಶ್ವರ್ಯದಿಂಸುಖದಿಬಾ ಳುವರು ॥ ೯ ॥ ವಚನ॥ ಇಂತೆಂದು ಮತ್ತೆನಡೆವಂಥಾ ನಡತೆಗಳಂ ಪೇಳ್ವನದೆಂತನೆ.

ಏಕತಾಳ॥ ನವಗ್ರಹದೋಷವುನರಮನುಜರಿಗಿಲ್ಲಾ । ಬಿತ್ತಾದಬೆ ಳೆವುನುಭೂಮಿಯೊಳಗಿಲ್ಲಾ ॥೧॥ ಗೋವುಗಳುಕರೆಯದೇಹಾಲುಸುರಿ ಯುತಲಿರಲೂ । ಯಾವಾಗನೋಡಲೂಅಪರಿಮಿತವಾಗಿ ॥೨॥ ಕರು ವಿಗೆಬಿಟ್ಟಾಮೊಲೆಕರಗಾಳಿಕುಡಿದವು । ಮಿಕ್ಕಯರಡುಮೊಲೆಜನರುಕ ರಿಯುವಾರೂ ॥೩॥ ಧರ್ಮಗಳನ್ನುನಾಲ್ಕುಪಾದದಿಂನಡವದೋ । ಕ ರ್ಮವೆಂಬೊದುಜನರುಮಾಡುವದಿಲ್ಲಾ ॥೪॥ ಯಿಂತುಐವತ್ತಾರುದೇ ಶದೊಳಗೆಯಿಲ್ಲಾ ॥ ಕಪ್ಪಕೈಗಾಣಿಕೆಯತರಿಸಿಕೈಕೊಳುತಾ ॥೫॥

ವಚನ॥ ಇನ್ನೂ ನಡೆವಂಥಾ ನಡತೆಗಳನ್ನು ವಿಸ್ತಾರದಿಂದ ಹೇಳ್ವೆನದೆಂತನೆ.

ಸಾಂಗತ್ಯ॥ ಆಗಲಾದೇಶದೊಳಾಗೊಂದುವೃಷಭಾನು । ತಾನಾಗಿ ಅರಣ್ಯಸೇರಿ ॥೧॥ ಇರಲುಆಕಾಡೋಳುವೃಷಭರಾಜನು೦ಮತ್ತೆ । ಹಸನಾಗಿಪುಲ್ಮೇವುತಿರಲೂ ॥೨॥ಪುಲಿಯೆಂಬೊವ್ಯಾಘ್ರನುನಲಿಯುತಾಬರಲಾಗ । ಘಳಿಲಾನಕಂಡೀತುವೃಷಭಾ ॥೩॥ ಕಂಡುನಿರ್ಭಯದೊಳುಕಡುಭೀತಿಯಿಲ್ಲಾದೆ । ಮುಂದೀಸಿಪುಲ್ಮೇವುತಿರಲೂ ॥೪॥ ಕಂಡುಆಹುಲಿರಾಯಕಡುಕೋಪದಿಂದಾಲಿ । ವಡನೆಮುಂಡಿಸಿನೋಡುತಿರಲೂ ।
ತನ್ನೊಳುತಾನೆತಿಳಿದುನೋಡಿಆಪುಲಿ । ಯನ್ನಕಂಡರೆಭಯವಿಲ್ಲಾ ಯನ್ನಕಂಡರೆಭಯವಿಲ್ಲವೆಂತಾಯಿತು । ಲಂಕೇಯುತಾಕಿನಿಂತೂ ॥ ಇನ್ನೀದುಲಂಕೆಯೂಹಾಕುತ್ತಯಿವೆಯೆಂದು । ಪುಲಿಯುಕೋಪವುಮಾಡಿತಾಗ ॥೮॥ ಧರಣಿಯೊಳ್ನಳರಾಜಾನಾಸತ್ಯಾದಿ । ಯಿನಾಯುತ್ತಗರ್ವದಿಂದಿಹುದು ॥೯॥ ಇಂಥಾಧೊರೆಗಳೆಷ್ಟುಮಂದಿಆಳಿರ್ದನ್ನು ಈಧೊರೆಗೆಯಿನಾರಾಜ್ಯಸ್ಥಿರವೆ ॥೧೦॥ ಯಾವರೀತಿಯೊಳಾದರೂಹಿಡಿದುನಿನ್ನ । ಗುಂಡಿಗೆಕೊಬ್ಬಾಹೀರುವೆನು ॥ ೧೧ ॥ ಬೇಗದಿಂನಿನ್ನಾತಿನ್ನದಿದ್ದರೆ । ನಾನುಪುಲಿಗೆಪುಟ್ಟಿದಪುಲಿಯಲ್ಲಾ ॥೧೨॥ ಇಂತುಪ್ರತಿಜ್ಞೆಯಮಾಡುವನಿತರೊಳು । ವಿಷ್ಣುಚಕ್ರವುಸಂಪುಮಾಡೆ ॥ ಅಷ್ಟರೊಳಗೆಚಕ್ರದಿಟ್ಟತನದೀಬಂದು । ನೆಟ್ಟನೆಪುಲಿಶಿರವರಿದೂ॥೧೪॥ ಬೇಗಾನೆಕಮಲಾಕ್ಷಪರಿಗೆವಪ್ಪಿಸಿತಾತ । ಚಕ್ರಯಿನಾತೆರದಿಕೇಳ್ವೆಯಾ ಅದರಿಂದಈನಳರಾಜಾನಾದೇಶದಿ । ಅನ್ಯಾಯವಿಲ್ಲಿಹೆಚ್ಚಿದರೂ ॥೧೫॥ ಆಗಲಿಆಚಕ್ರಬಂದುಖಂಡ್ರಿಸುವಾದು । ಬೇಗಾದಿಂದೀರಾಷ್ಟ್ರದೊಳಗೆ॥ ೧೬ ॥ ಇಂತುದುರ್ದೋಷವಾಸಾಗಲೀ । ಸಾದಚಕ್ರಅನಂತದೇಶವಕೊಲ್ಲುತಿರಲೂ ॥೧೮॥ ಸಂತೋಷದಿಂನಳರಾಜನೈಶ್ವರ್ಯಾದಿ ಅಂತ್ರಾಗರಾಜ್ಯನಾಳುತಿರಲೂ ॥

ವ॥ ಇಂತೊಪ್ಪುವ ನಳರಾಜನು ರಾಜ್ಯವನ್ನಾಳುತ್ತಿರಲು ಒಂದಾನೊಂದುದಿನ ವಸಂತಕಾಲದೊಳು ಶೃಂಗಾರದ ವನಾಂತರವಂ ನೋಡಬೇಕೆಂದು ಪೋಗುವ ವಿಸ್ತಾರವಂ ಪೇಳ್ವೆನದೆಂತನೆ.

ಸೀಸಪದ್ಯ ॥ ಮಾನ್ಯರುಮಂತ್ರಿಯರುಮಾವುತರುರಾವುತ
ರುಸನ್ನುತದಿಸಕಲವಾದಂತಜನರು ।ಶೃಂಗರದನಾರಿಯರುಸಂಗೀತ
ಪಂಡಿತರು ಮಂಗಳಪಾಠಕರುನುತ್ತೆಬರಲು ॥ ಹಡಪಚಾಮರದವ
ರುಹಿಡದಸುತ್ತಿಗೆಯುವರು ॥ ಕುಡಿನೀರುಗಿಂಡಿಯರುಸಂಚಿಯುವ
ರು । ಪುಣ್ಯಾಂಗದಾಜನರುಪರಿಹಾಸ್ಯಪಂಡಿತರು । ಮದನಪಾತಂ
ಗಿಯರುಮತ್ತೆಬರಲು । ಪುಣ್ಯಶಾಸ್ತ್ರಿಕರುಪುರಾಣಜನರು । ಯಿಂತು
ನಾನಾಬಗೆಯಪರಿವಾರಸಹಿತ । ಅನಂತಸಂತೋಷದಿಂದಾಗಧೋರೆ
ಯು । ಕಂತುವಿನಶೃಂಗಾರವನಕೆಬರಲು ॥

ವ॥ ಇಂತೊಪ್ಪುವಶೃಂಗಾರವನಾಂತರಕ್ಕೆ ಬಂದುಫಲಬಗೆವೃಕ್ಷಂ
ಗಳನ್ನುವರ್ಣಿಸುತಿರ್ದರೆಂತೆನೆ.

ಜಂಪೆ॥ ಮಡಿವಾಳಕೇತಕಿಯುಬಿಲ್ವಪತ್ರೆಯುದವನ । ಕಡುಚೆ
ಲ್ವಮಲ್ಲಿಗೆಯುಬೆಡಗಿನಿಂದಿಹವು ॥೧॥ ಸುರಹೊನ್ನೆಸಂಪಿಗೆಯುವ
ರಪಾರಿಜಾತಗಳು ॥ ಪರಿಪರಿಯವೃಕ್ಷಗಳುಫಲಬಗೆಯೊಳೆಸೆಯೆ ॥೨॥
ನಿಂಬೆಕಿತ್ತಳೆಹಲಸುಶೃಂಗಾರದಮಾವುಗಳು । ಕೊಂಬುಕೊಂಬೆಗೆಫ
ಲವುಸಂಭ್ರಮದೊಳಿಹವೊ ॥೩॥ ಆಲಬೇಲದಮರವುಮೇಲುಚೆಂದನ
ದ್ರಾಕ್ಷಿ । ಸಾಲುಪತ್ತಳಿವನವುನೀಲಿಯಿಂದೆಸೆಯೆ ॥೪॥ ತೆಂಗುಅಡಿಕೆ
ಯಮರವುಸಂಗತಿಯುಕದಳಿಗಳು । ಅಂಗನೆಯದಂತಕ್ಕೆಸಮವು
ದಾಡಿಂಬೆ ॥೫॥ ಮೊಲ್ಲೆಮಲ್ಲಿಗೆಜಾಜಿಮುಡಿವಾಳಕೇತಕಿಯು । ಬಿಲ್ವ
ಪತ್ರೆಯುದವನಅಲ್ಲಿಯುಸೆದಿಹುದು ॥

ವ ॥ ಇಂತೊಪ್ಪುವವೃಕ್ಷಗಳಮೇಲೆ ಸಂಚರಿಸುವಂಥಾ ನಳಿನಗೊಳಿ
ನಫಲವಂಪೇಳುತಿರ್ದರರೆಂತೆನೆ

ಏಕತಾಳ ॥ ಗಿಳಿಯುಕೋಗಿಲೆಗಳುಸುಳಿದುಕೇಣಿವಂಥಾಬಳಗಸಂ
ಭ್ರಮದಿಂದಪೊಗೆಯುತಿರಲೂ ॥ ೧ ॥ ಅಂಗಹರಿಣಬಾಲಶೃಂಗಾರ
ಪರಿಮಳ ॥ ಸಂಗಾತಿಯಿಂದೆಲ್ಲಸಂಭ್ರಮಿಸಿರಾಲು ॥ ೨॥ ಇಂತಪ್ಪವನ
ದೊಳುಸಂತೋಷದಿಂಭೂಪ । ನಂತಾಪುಷ್ಪಗಳೆಲ್ಲತರಿಸಿನಾಗ ॥೩॥
ಪುಷ್ಪಹಾಸಿಗೆಮಾಡಿಸರ್ಪಶಯನನಂತೆ ॥ ಪಪ್ಪದಿಂದಲಿನಳರಾಜ
ಕುಳಿತಿರಲೂ ॥೪॥ ತಂಪಾಗೆಮಾರುತಬಂಣೀಶೀಬೀಸಲು । ಕಣ್ಣೆಗ

ಪ್ರಿಯವಾದಜಾಣ್ಮೆಯಿಂದಿರಲೂ ॥

ವ ॥ ಇಂತೊಪ್ಪುವನಳಚಕ್ರವರ್ತಿಯು ಆ ವಸಂತಕಾಲದಲ್ಲಿ ಆವ ನಾಂತರಕ್ಕೆ ಕಾರಣಕರ್ತನಾದವಸಂತದೇವರಪೂಜೆಯಂ ಮಾಡಬೇಕೆನಲೂ ಮಂತ್ರಿಯುಹಾಗೆ ಆಗಲಿಯೆಂದು ಹೇಳುವವಸಂತದೇವರ ಪೂಜೆಯಂ ಮಾಡುವವಿಸ್ತಾರವಂಹೇಳ್ವೆನದೆಂತೆನೆ

ದ್ವಿಪದೆ ॥ ಕನಕದಕಂಭಗಳುಘನಚಪ್ಪರಗಳು । ವಿನಯದಿಂರಚಿಸುವವಿವರವಂಕೇಳಿ । ಮುತ್ತಿನಾತೋರಣವುಮುದದಿಂದಕಟ್ಟಿ ॥ ಘನವಾದಕವಳಿಕಾಸ್ತಂಭಗಳನಿಲಿಸಿ । ಹೊಂಬಾಳೆಪುಷ್ಪಗಳುತುಂಬರಚಿಕರಿಸಿ । ಅದರೊಳಗೆಯಿನ್ನುಕಸ್ತೂರಿಯುನುತರಿಸಿ । ಪನ್ನೀರುಕಲಸಿರಲು ಸಂಭ್ರಮದಿವಂಟಪವಸಕಲರತ್ನಗಳ । ಯಿಂದಿನಿಂದಲುಚಿನ್ನಿಗನಾದವಸಂತದೇವರನು । ಚಂದದಿಂಪ್ರತುವೆಂಯುತಿದ್ದನಿಲಿಸಿದರು । ಅದರೊಳಗೆಯಿನ್ನು ಹೇಮಪುಷ್ಪಗಳೊಳಗೆ । ಶೃಂಗರವಮಾಡಿದರುಅತಿಸೊಬಗಿನಿಂದ । ನವರತ್ನಹಾರಗಳನೆಟ್ಟನೆಯಿಂಧರಿಸಿಕುಂಕುಮದಿಪುಷ್ಪಗಳಕುಶಲದಿಂಧರಿಸಿ । ಧೂಪದೀಪವುಗಂಧಅಕ್ಷತೆಯು ಶ್ರೀಪತಿಯಭಕ್ತನುಮಂತ್ರಿಸಹವಾಗಿ । ಆವಸಂತನತಾವುಪೂಜೆಯಂಮಾಡಿ । ಸಾಷ್ಟಾಂಗದಂಡಪ್ರಣಾಮದಿಂದೆರಗಿ । ಭೂಸುರರುಗಳಿಗೆದಾನವಕೊಡಿಸಿ । ಬೇಗಗೋದಾನಭೂದಾನಗಳು । ಸಕಲರುಸುಹಿತರಾಭ್ರಮದೊಳಾಗಾ ।ಸುಖದಿಂದನಳರಾಜಸಂಭ್ರಮದೊಳಿರಲೂ ॥

ವ ॥ ಇಂತೊಪ್ಪುವಸಮಯದಲ್ಲಿನವಾಂತರಕ್ಕೆ ದೇವಲೋಕದಿಂದ ಹಂಸಪಕ್ಷಿಗಳುಬರುವಸಂಭ್ರಮವಂಹೇಳ್ವೆನದೆಂತೆನೆ

ರಾಗ—ಕಲ್ಯಾಣಿ ॥ ಹಂಸಪಕ್ಷಿಗಳೂಬಂದವೂ । ದೇವಲೋಕದಿಂ ಹಂಸಪಕ್ಷಿಗಳುಬಂದಾವೂ ॥ ಪಲ್ಲವಿ ॥ ಹಂಸಪಕ್ಷಿಗಳುಬಂದುಅತಿಹರುಷದಿಂದಲಿ ಕಂಸಾರಿಭಕ್ತನಾದನಳಚಕ್ರವರ್ತಿಬಳಿಗೆ ॥ ೧ ॥ ಸುವರ್ಣಶರೀರದಿಂದಲಿ । ಆಪಕ್ಷಿಗಳವಿಮಾಲನೇತ್ರಗಳಿಂದಾಲಿ । ಕಮಲಾಕ್ಷಭಕ್ತನಾದನಳಚಕ್ರವರ್ತಿಬಳಿಗೆಕುಶಲಾದಿಂದಾಲಿಬಂದುಹಸನಾಗಿಆಡಿಪಾಡಿ ॥ ಹಂ॥೨॥ಕೋಕಗಾಳುಪವಳಾಪವರ್ಣಾದಿ । ಆಪಕ್ಷಿಗಳುಪದ್ಮಾಕ್ಷಪದ್ಮರಾಗಾದಿರಕ್ಷಕಶ್ರೀಹರಿಯಭಕ್ತನಳರಾಜನಬಳಿಗೆ ॥

ಯುಕ್ತಿಯಿಂದಲೆಬಂದೂಮುಕ್ತಿಬೇಡುವೆನೆಂದು ॥ ಹಂ ॥೪॥

ವ॥ ಇಂತೊಪ್ಪುವ ಹಂಸೆಪಕ್ಷಿಗಳನ್ನು ನಳರಾಜನುಕಂಡು ॥ ಸಂತೋಷಪಟ್ಟು ಮಂತ್ರಿಕೂಡೆ ಯೇನನ್ನು ತಿರ್ದಾನು

ಜಂಪೆ ॥ ಎಲ್ಲಿಂದಬಂದವೊಯಿರಾಜಹಂಸೆಗಳು ಯಿಲ್ಲಿವಂದೀನುಹಿಡಿದುತರಬೇಕುಯೆಂದಾ ॥೧॥ ಯೆಂದುಆನಳರಾಜಮಂತ್ರಿಮಾನ್ಯರುಸಹಿತ ಬಂದರಾಪಕ್ಷಿಗಳಹಿಡಿಯಬೇಕೆನುತಾ॥೨॥ಕಂಡುಪಕ್ಷಿಗಳೆಲ್ಲಭಯವಾಗಿತಾವಿನ್ನುವಂದುವೃಕ್ಷದಮೇಲೆಬಂದುಕುಳಿತಿರಲೂ ।ಬಂದುಆನಳರಾಜಸುತ್ತಯೆಲ್ಲಾರನಿರಿಸಿ । ಮತ್ತೆಆಮಂತ್ರಿಯನುಹತ್ತಿಸಿದಾಮರವಾ ॥೪॥ ಅದುಕಂಡುಪಕ್ಷಿಗಳುಬೆದರಿಭೂಮಿಗೆಯಿಳಿದುಪದರಾದಿಕುಳಿತಿರಲುಕಂಡಾನಳನಾಗಾ ॥೫॥ ಯಿಳಿದುಬಾಮಂತ್ರಿನೀನೊಂದು ಕಡೆಯಲ್ಲಿನಿಲ್ಲು ಬಳಿಕನಾನೊಂದುಕಡೆಯಲ್ಲಿನಿಲ್ವೆನುಯೆಂದಾ ॥೬॥ ಯೆಂದುಸುತ್ತಾಲುಬಳಸಿವಂದುಪಕ್ಷಿಯಹಿಡಿಯೆಕಂಡುಪಕ್ಷಿಗಳೆಲ್ಲಕಡೆಗೆಹಾರಿದವೊ ॥

ವ ॥ ಇಂತೊಪ್ಪುವಪಕ್ಷಿಗಳುಹಾರಿಪೋಗಲು ಆನಳರಾಜಕೈಗೆಸಿಕ್ಕಿದಪಕ್ಷಿಯು ಚಿಂತಿಸುವ ವಿವರವಂ ಪೇಳ್ವೆನದೆಂತೆನೆ

ಕುರುಚಜಂಪೆ ॥ ಯಿಲ್ಲಿಗೆನಾವೀಗಬಂಧೂಯಿರಾಧೊರೆಗೆಶಿಕ್ಕುವಂತಾಯ್ತುಯೆಂದು॥ ೧ ॥ಈರಾಜನೇನುಮಾಡುವನೊಯೆನ್ನಪೂರ್ವಾಜಿನಿತದಫಲವಿದೀ ॥೨ ॥ಏನಾದರೂಆಯಿತಿನ್ನೊಯಿದಕ್ಕೆನಾನುಚಿಂತಿಪಲ್ಯಾಕೆಯಿನ್ನು ॥೩॥

ಯೆಂದುಧೈರ್ಯವಮಾಡೆಪಕ್ಷೀಆಗಸಂಪೇಹವಳಿದುಚಪಲಾಕ್ಷಿ॥೪॥ ಕಂಡುನಳರಾಜಪಕ್ಷಿಯನುತಾನುಚಂದದಿಂದಮುದ್ದಾಡುತಿಹನೊ॥೫॥ ಅದಕಂಡುಪಕ್ಷಿಸಂತಸದಿತಾಚಪರತನದಿಂದ ನುಡಿದುವಿನಯದಲಿ ॥೬॥ ಮಾನವರುಮಾತಾಡಿದಂತೆಆಪಕ್ಷಿಜಾಣತನದಲಿನುಡಿಯಿತಂತೆ

ವ ॥ ಈಪ್ರಕಾರದಿಂದಪಕ್ಷಿಯುನಳರಾಜನಂನೋಡಿಪೆನೆನ್ನುತಿರ್ದುದು ಯೇಲಪದ ॥ ಕೇಳುಭೂಪಾಲಕನಿಮಗೆಪೇಳುವೇದವಯಂತಿಯರೂಪು । ಲಾಲಿಸಿಕೇಳೈಯ್ಯನೀನೀಗಾ । ಓನಳರಾಜಾ ನಾಳೆಅರುವಾಗುವದೂನಿಮಗಿನ್ನೂ ಆಪದ್ಮಗಂಧಿಯರೂಪುರೇಖೆಚೆದ್ರೂ

ಪುಶಿವನೆಬಲ್ಲಾ ಮುದ್ದುಮುಖದಪದ್ಮಾಗಂಧಿಯಾ ಓನಳರಾಜಾ॥ಸದ್ವನಾನೋನೋಡಿಬಂದೆನೊ ।೨। ಚಂದ್ರೋದಯಲ್ಲಾ ಶಿವಗೇನುಚಂದದಿಂದಾನಿಮಗೇಹೇಳಿ । ಅಂದದಿಂದಾಪೋಪೇನುತಾಲಿ ಬಂದೆನಿಮ್ಮಡಿಗೆಯೆಂದು ನಾವುಪೋಪೆನುತಾಲಿ ।೩। ಭೂಮಿಯಲ್ಲಾತಿರುಗೂತಿಹೆನೂ।ಅಂತಾಕಾಮಿನೀಮಣಿಯಕಾಣೆಸ್ವಾಮಿನಿಮಗೆತಕ್ಕಂಥಾಓನಳರಾಜಾಸಾಮಜಗಮಗೆ ಆಕೆಯೂ ॥೪॥ ಕಣ್ಣಿನಲ್ಲಿನೋಡೀದೇನು ಸಣ್ಣನಡುವಿನಬಾಲೆಯನ್ನು ಹೆಣ್ಣನಿನ್ನಾವಶವಮಾಡುವೆನೊ ಓನಳರಾಜಾಪುಣ್ಯವುಳ್ಳಾಪುಷ್ಪಗಂಧೀಯುಪಾರ್ವತೀಸರಸ್ವತೀಯೂರ್ವಶಿರಂಭೇಮೇನಕಿಯೂ ಯೂರ್ವಿಯೊಳಗೇಯಿರುವಾಕಾಮಿನಿಗೆ । ಓನಳರಾಜ । ಮಿಾರಿದಂತಾಕಾಮಿನಿಯಾಕೆಯೂ ॥ ಅಂತಾದಮಯಂತೀನಿಮಗೆಸ್ವಾಂತದಿಂಮದುವೇಯಮಾಡಿ ಸಂತೋಷದಿಂದಲಿಕೇಳೈಯಾ । ಓನಳರಾಜಾ । ಚಿಂತೆಮಾಡಾದಿರುನೀನಿನ್ನೂ ।೭। ಯೆನಾದರುಕಷ್ಟಾಪಟ್ಟುನಾನುನಿನ್ನವಶಮಾಳ್ಪೆ ಜ್ಞಾನದಿಂದಾನೀನುಕೇಳೈಯ್ಯಾ ಓನಳರಾಜ ಸಾನಿನೀಯನಿಮ್ಮಾವಶಮಾಡುವೆನೊ । ೮ ।ಈಪಕ್ಷಿಕೈಯ್ಯಲ್ಲಿನ್ನುಯೇನಾಗುವದುಂದೊಮನದಿಸಂದೇಹವ ಮಾಡಬ್ಯಾಡೈಯ್ಯಾ। ಓನಳರಾಜಾಹಂಸಗಮನೆನಿನ್ನೊಡವೆಮಾಡುವೆನೊ ।೯। ಯಿದಕೇನಾನುಒಪ್ಪುವದಿಲ್ಲ ಮದನಾಜನಕನಾಣೆಯಿನ್ನು । ಹೃದಯದೊಳಗೆನೀನುಯಿರಿಸೈಯ್ಯಾ ಓನಳರಾಜ ಮದನವೇಣಿಯವಶವಮಾಡುವೆನು ।೧೦। ಸಣ್ಣಾನಡುವಿನಬಾಲೆಯನ್ನುನಿನ್ನವಶವಾಮಾಡೋತನಕಕಣ್ಣಿಗೆನಿದ್ರೆಯುಬಾರದು । ಓನಳರಾಜ ಹೆಣ್ಣನಿನ್ನೊಶವಮಾಡುವೆನೊ ।೧೧। ಸೂರ್ಯಚಂದ್ರಾರಾಣೆಯಿನ್ನು ಧಾರುಣೀದೇವಿಯರಾಣೆ । ನಾರಾಯಣಸ್ವಾಮಿಯಾಣೆಯೂ । ಓನಳರಾಜ । ಆನಾರಿಯನಿನ್ನೊಶವಮಾಡುವೆನು ॥

ವ ॥ ಇಂತೆಂದುಹೇಳಿದಪಕ್ಷಿಯವಾಕ್ಯವಂಕೇಳಿ ಆಪಕ್ಷಿಯಕೂಡೆ ನಳರಾಜ ಏನೆಂನುತಿರ್ದನು.



ಜಂಪೆ॥ ಆಯಿಂದುವದನೆಮತ್ತಾವಅರಸಿನಮಗಳು । ಆಯಾವೃತ್ತಾಂತವುಪಕ್ಷಿರಾಜಹೇಳೈಯಾ ॥೧॥ ನೀನುಹಂಸೆಯುಮರಿಯು । ಆ

ಕೆಥೊರೆಯುಮುಗಳು । ಆಕೆಗುನಿನಗೂಸ್ನೇಹಪ್ಪಾಗಾಯ್ತು ॥೨॥ ವನದೆ ಳಗೆಚರಿಸುವವನದಪಕ್ಷಿಯುನೀನು । ಮನೆಯೊಳಗೆಇರುವಂತವಮಾನಿನಿಯುಆಕೆ ॥೩॥ ಆಕೆಗೂನಿನಗೂಸ್ನೇಹಹೊಂದಿದಬಗೆಯುನಾನುಕೇಳುವೆನೀಗಪೇಳಬೇಕೆನಗೆ ॥೪॥ ಅವಳವೃತ್ತಾಂಗಳಲಿದ್ಯಂತವೆಲ್ಲವನು ವಿವರದಿಂಪೇಳಿದರೆನಂಬುವೆನು ನಾನೂ ॥೫॥

ವ॥ ಇಂತೆಂದು ಆ ನಳರಾಜಕೇಳಲು ಪಕ್ಷಿರಾಜನು ದಮಯಂತಿಯ ವಿಸ್ತಾರವಂ ಪೇಳುತಿರ್ದನದೆಂತೆನೆ.

ದ್ವಿಪದೆ॥ ಧರಣೀಶಕೇಳುವಿದರ್ಭಾಪುರವೆಂಬಶಿರಿ । ಯುಳ್ಳಪಟ್ಟಣದಥೊರೆಭೀಮರಾಯ । ಭೂಪಾಲರಿಗೆಚಂದ್ರಭೋಗದೇವೆಂದ್ರ । ಸಾಕಾರದಿಂಸಕಲರಾಜ್ಯವನಾಳುವಂತಾ । ಭೂಪಾಲರಿಗೆಚಂದ್ರ ಅವನಿಗೆಸಂತತಿಇಲ್ಲದಿರಲು । ಜಪಗಳುತಪಗಳುಸಕಲದಾನಗಳು । ಅಪರಿಮಿತವಂಮಾಡಿಆಲಶಿತಾನೀಗ । ಕಡುದುಃಖವೆಂಬ ಸಾಗರದೊಳುಮುಳುಗಿ । ಪೊಡವೀಶನಾಸ್ಥಾನವಂಟಿಪಕೆಬಂದು । ಮಂತ್ರಿಮಾರ್ಬಲಸಕಲಮಾನ್ಯರಕರಶಿ । ಸಂತತಿಯುವಿಚಾರ ಸಕಲರಿಗೆಪೇಳಿ । ದಾನಧರ್ಮಗಳುಯೇನಮಾಡಿದರುಹೀನನಾಗಿಪ ಯನಗಿಸುತರಲ್ಲದಿರು । ಪುತ್ರರನುಪಡೆಯದಪೃಥ್ವಿಯುಜನಕೆ । ಪುತ್ರವುಸ್ವರ್ಗಭೋಗಗಳುಯಿಲ್ಲವೆಂದು । ಸಕಲವೇದಂಗಳೊಳುಸಾರುತ್ತಾಲಿದೆಕೊ । ವಸುಧೆಯೊಳುಈತನುವು ಯಾರುನಂಬುವರು । ಪೊಸಗಿದಯಿರಾಜ್ಯಭೋಗಗಳುನಮಿಗ್ಯಾಕೆ । ಈಭೋಗಭಾಗ್ಯಗಳುಕೇಳುವರೆಜನರು । ಈಗನಿಮಗೆಪುತ್ರರಿಷ್ಟ್ಯಂದುಕೇಳುವರು । ಇದುಸಿದ್ಧವಾಗಿದೆಯೆಂದು । ಆಥೊರೆಯುತರುಣಿಯುಮಂತ್ರಿಗೆಪೇಳಿ । ಸಕಲಪರಿವಾರಮಂಸಮ್ಮತಿಗೆಡಿಸಿ । ತಪಕೆವೋಗುತಲಿರ್ದಭೀಮಭೂಪಾಲ ॥

ವ॥ ಇಂತು ಭೀಮಸೇನರಾಯನು ತಪಸಿಗೆ ವೋಗುವವಿಸ್ತಾರಮಂಪೇಳ್ವೆನಂದೆಂತೆನೆ.

ಏಕತಾಳ ॥ನಾರಮುಡಿಯನುಟ್ಟುಸಾರಜಡೆಯಕಟ್ಟಿ । ಭೂರಿವಿಭೂತಿಯುಶರೀರಾದೊಳ್ಧರಿಶಿ ॥೧॥ ರುದ್ರಾಕ್ಷಿಸರಗಳರೊಢಿಯಿಂದಲಿ

ಹಾಕಿ । ಭವಕೃಷ್ಣಾಂಜನವಭರದಿಂದವ್ಹೋದೆದೂ ॥೨॥ ತಪಸಿವೇಷ ವತಾಳಿನೃಪತೀಯುಸತಿತಾನು । ತಪಕೆವ್ಹೋಗುತಿರೆತಾವುಲಕ್ಷಣದಿ ॥೩॥ ಪುರದಜನರುಯಲ್ಲಾ ಪರಿಪರೀಗುಂಪುಗೂಡಿ । ಮೊರೆಯಿಟ್ಟು ದುಃಖಾವಮಾಡುತಲಿರಲ‌ು ॥೪॥ ಯೆಲ್ಲರುವುಪಚರಿಸಿಯೇಣಾಕ್ಷಿಯು ತಾನು । ನಿಲ್ಲಾದೆವನವಾಸಭೂಪಿಜಾಪ್ಹೊರಟಾ ॥೫॥

ವಚನ ॥ ಇಂತೊಪ್ಪುವ ರುಷಿವೇಷವಂ ತಾಳಿ ಘೋರಾರಣ್ಯವಂ ಶೇರಿ ತಪಸ್ಸುನಮಾಡುವ ನಿಸ್ತ್ತಾರವಂ ಪೇಳ್ವೆನೆಂತೆನೆ.

ಕಂದ॥ ಕೆಂಜೆಡೆಗಳನ್ನು ವ್ಹೊಳೆಯುವ। ರಂಜಿತರುದ್ರಾಕ್ಷಸರವುನ ಲಿಯುತಲಾಗಾ। ಸಂಜೀವನವಾದವುನಮುನೀಂದ್ರನುಬಂದನುಅ ತಿಹರುಷದಿಂದಾಕಾಂತಾರದೊಳು ॥೧॥ ಅರಣ್ಯಭೂಮಿಶೇರುತ । ನಾ ರಿಯುಆಭೀಮರಾಯಅತಿಹರುಷದೊಳು । ನಾರುಬೇರುಗಳುಮೆಲ್ಲುತ ಕಾರುಣ್ಯದರುಷಿಗಳಂತೆಚರಿಸುತಲಿರ್ಪನೂ ॥ ೨ ॥ ಬಂದಂತೆಮುನಿ ಯುಚರಣಕೆ । ವಂದಿಶಿಆಭೀಮರಾಯುಅತಿಹರುಷದೊಳು॥ ನಿಂದಿರಲು ಮುನಿಯುಕೇಳಿದ। ಚಂದದವಿನಯಂಗಳಿಂದೆಅಭೂನಾಥನೂಯಾ ವಸ್ಥಳದಿಂದಬಂದಿರಿ।ಈವನದೊಳುಕಾಣೆನಿಮ್ಮಯುಲೊನರನಾಥ।ನೀ ನುರುಷಿವೇಷದಿಂದಲಿ। ಬಾಲೆಯುನೊಡಗೊಂಡುಬಂದಕಾರಣವೇನ್ನೊ॥

ವಚನ ॥ ಇಂತೆಂದು ಕೇಳಿದ ರುಷಿಯು ಕೊಡೆ ಭೀಮರಾಯನು ತನ್ನ ವೃತ್ತಾಂತವಂ ಪೇಳುತಿರ್ದನೆಂತೆನೆ.

ಕುರುಚಜಂಪೆ॥ ತಾಪಸಾವರ್ಯಕೇಳ್ಮೆಯ್ಯಾನಾನು। ಭೂಪಾಲಭೀ ಮಸೇನ್ನೆಯ್ಯಾ ॥೧॥ ಈನಾರಿಯುಯನ್ನ ಅರಸೀ। ಸಹಿತಶಿರಿಯುಸಂ ಪತ್ತುಯೆಲ್ಲವನಾಮರಶಿ ॥೨॥ ಯನ್ನ ಪಟ್ಟಣವುವಿದರ್ಭಅದರೊಳಗೆ। ಇನ್ನು ಯಿರುತಿಹುದುನಿನ್ನ ಗರ್ಭ ॥೩॥ ನಾನಾಬಗೆಯದಾನಗಳನು ಮಾಡಿ।ಮಕ್ಕಳಿಲ್ಲದೆಬೇಗನಾನು॥೪॥ ನಾನುರುಷಿವೇಷವನುತಾಳಿಯಿಾ ಗ। ಮಾನುನಿಯನೊಡಗೊಂಡುಕೇಳಿ ॥ ೫ ॥ ಕಾನನದಭೂಮಿಯೊ ಳ್ಬಂದೂ। ನಿಮ್ಮಧ್ಯಾನವನುಮಾಡುತಿಹೆನೆಂದೂ ॥ ॥೬॥

ವ॥ ಇಂತು ಪೇಳಿದ ಭೀಮಸೇನನೊಡನೆ ದಮನಮುನೀಶ್ವರನು ದಯಾರಸಭರಿತನಾಗಿ ಯೆನೆನ್ನುತಿರ್ದಾನು.

ತ್ರಿಪುಡೆ॥ ಭೂಮಿಪಾಲಕನಮ್ಮನಂಬೀವನಕೆಬಂದುಶೇರಿದೆ। ಪ್ರೇಮದಿಂದನಿನ್ನಗೋಸುಗಬಂಪೆಮೈಯಹ್ಯಾ॥೧॥ ಬ್ರಹ್ಮದೇವರಕುರಿತು ಬೇಗದಿತಪಸುಮಾಡೀಯಿಗಾಲೆ। ನಿನಗೆಸುತರನುಪಡಮೆಕೊಡುವೆ ನಾನುಪೋಗಿ ॥೨॥ ಯೆಂದುಭೀಮಗೆಪೇಳಿಆಮುನಿ। ಚಂದದಿಂದಾ ಪೋದರುನಿಂದಾರಾಗಾಪುಣ್ಯಸ್ಥಳದೊಳುಅಂದುಬೇಗಾ ॥೩॥ ಬ್ರಹ್ಮದೇವರಕುರಿತುವುಗ್ರತಪವಮಾಡಲುಶೀಘ್ರದಿಂದರಿ। ಬ್ರಹ್ಮದೇವರು ಮೆಚ್ಚಿ ಮುನಿಪಗೆವರವನಿತ್ತಾ॥೪॥ ಬಂದುನಿಜರೂಪವನುತೋರಿಯೆ ಯೆಂದಮುನಿಪಗೇಯಿಕ್ಷಣ । ಯಿಂದುನಿನ್ನಯಮನದಬಯಕೆ ಯನೀವೇಕೇಳು ॥ ॥೫॥

ವಚನ॥ ಇಂತು ಪ್ರತ್ಯಕ್ಷರಾದ ಬ್ರಹ್ಮದೇವರಿಗೆ ಸಾಷ್ಟಾಂಗದಂಡಪ್ರಣಾಮವಂ ಮಾಡಿ ಸ್ತುತಿಸಿದನದೆಂತೆನೆ.

ಕಂದ॥ ಈಜಗಕೆಸ್ರುಷ್ಟಿಕರ್ತನು। ಮಿಗೆಲೋಕಗಳಿಗೆಲ್ಲಸಲಹಿರೆಷಿಪದೇವರು ॥ ಸೊಗೆಸಿಂದಯಜ್ಞಪತಿಯೆ। ಅಜದೇವರನಿಮ್ಮಪೊಗಳಲ್ಕಳವೇ ॥

ವ ॥ ಇಂತುಸ್ತುತಿಸಿದ ದಮನಮುನೀಶ್ವರನಕೊಡೆ ಬ್ರಹ್ಮದೇವರು ಏನನ್ನುತಿರ್ದಾರು

ದ್ವಿಪದೆ॥ ಬಾರೈಯ್ಯಮುನಿರಾಯಯಿಂತುಕಷ್ಟದಲಿ। ಘೋರತಪವನುಮಾಡಕಾರಣವೇನು। ಬೇಗದಿಂವೃತ್ತಾಂತಭಯವಿಲ್ಲದರಹು ಯೆಂದುಅಪ್ಪಣೆಕೊಡಲುಚಂದದಿಂಮುನಿಯು ।ಯಿಂತೆಂದುಬ್ರಹ್ಮನಿಗೆಆಮುನಿರಾಯ ॥ ಭೀಮನೆಂಬುವನೊಬ್ಬಪ್ರಿಯಶಿಷ್ಯನೆನಗೆ। ಲೋಕಕ್ಕಧಿಕವಾಗಿರುವಂತಧೋರೆಯು । ಮಕ್ಕಳಿಲ್ಲದೆಬಹಳದುಃಖದಿಂದಿರಲು। ಸಕಲಭಾಗ್ಯವನ್ನೆಲ್ಲಬಿಟ್ಟುತಾನಿಲ್ಲಿ। ರುಷಿವೇಷವನುತಾಳಿವನಿತೆವಡಗೊಂಡು। ತಪಸುಮಾಡಲುನನ್ನಬಳಿಗವರುಬರಲು। ಅದರಿಂದಬಂದೆನುನಿಮ್ಮಬಳಿಗೆ। ಅವನಿಗೆವರವೀಯ್ಯಬೇಕುಯೆನಲು ಕಮಲಜದೇವಯೆಂದನಾಮುನಿಗೆ। ನಿನ್ನಶಿಷ್ಯಂಗೆ ಒಂದುಪುತ್ರನು ಪುತ್ರಿಆಗುವರೆಂದು। ವರವಿತ್ತುಮುನಿಗೆತಾಪೋದಕಮಲಜನೂ ॥

ವ॥ಇಂತೆಂದು ಬ್ರಹ್ಮದೇವರು ಬ್ರಹ್ಮಲೋಕಕ್ಕೆ ಪೋಗಲು ಆದ

ದಮನಮುನೀಶ್ವರನು ತಮ್ಮ ನಿಜಾಶ್ರಮಕ್ಕೆ ಬಂದು ತನ್ನ ಪ್ರಿಯ ಶಿಷ್ಯನಾದ ಭೀಮಸೇನಂಗೆ ಈ ವೃತ್ತಾಂತವಂ ಹೇಳಿ ಅತ ಅನೇಕಹರುಷಿತನಾಗಿ ಯೇನೆನ್ನುತಿರ್ದನು.

ಜಂಪೆ॥ ದಮನಾಖ್ಯಮುನಿನಿಮ್ಮದಯದಿಂದಯನಗೊಂದು। ಘನವಾದಸಂತಾನವಿನಯದಿಂದಾಯ್ತು ।೧॥ ಆಗಸ್ತುತಿಮಾಡಿದನು ಅವನೀಶತಾನಾಗ। ಬೇಗದಿಂದಪ್ಪಣೆಯಕೈಕೊಂಡಬಂದಾ ।೨॥ ತನ್ನ ರಾಣಿಯುತಾನುತನ್ನ ಪಟ್ಟಣಕೆಬಂದು । ಚೆನ್ನಾಗಿರಾಜ್ಯವನ್ನು ಆಳುತ್ತಿರಲೂ ॥೩॥ಅಷ್ಟರೊಳುಆಥೋರೆಯುಹೆಂಡತಿಯುಗರ್ಭದೊಳು। ಶ್ರೇಷ್ಠಾದಿಂಗರ್ಭವಂಧರಿಸಲಾಗಾ ॥೪॥ ಒಂದೆರಡುಮೂನ್ನಾಲ್ಕು ಅಯಿದಾರುಯೇಳೆಂಟು । ಸಂಘಿಸಿತುನವಮಾಸಯಿಂದುಮುಂಬಗಾಗ॥೫॥ಶುಭಲಗ್ನದೊಳುಆಗ।ಸುದತಿಪಡದಳುಮತ್ತೆಮದನಂಗೆಮಿಂಚಾದಮಗನಆಕ್ಷಣದಿ ॥೬॥ ಸತಿಪತಿಯುಸಹವಾಗಿಅತಿಹರುಷದಿಂದಿರಲು। ಹಿತದಿಂದಮತ್ತೊರ್ವಸುತೆಯಾದಳವರ್ಗೆ।೭॥ದಮನನೆಂಬೋನಾಮಗಂಡುಮಗನಂಗೆಯಿಟ್ಟು । ದಮಯಂತಿಯೆಂಬೋನಾಮಗಳಾನುಕರಾದು ॥೮॥ ಮಗಳಾಮೇಲಿರುವಂತಾಪ್ರತಿಹುಡುಗನಮೇಲಿಲ್ಲವಂತೆ । ಸೊಗಸಿಂದಮಕ್ಕಳನುಅಕ್ಕರೆವರಾಗಾ॥ ಆಗನೋಡಿನಿಮಗೆತಕ್ಕಕಾಮಿನಿಯೆಂದೂ।ಬೇಗದಿಂನಿಂಮಬಳಿಗೆಬಂದೆವುಸ್ವಾಮಿನಾವೂ ॥ ॥೧೦॥

ವ ॥ ಇಂತೆಂದು ಆಪಕ್ಷಿ ರಾಜನ ಕೊಡೆ ಈ ವೃತ್ತಾಂತವಂ ಹೇಳಲು ಪಕ್ಷಿಯು ಮತ್ತೇನೇನ್ನುತಿರ್ದುದು.

ಏಕತಾಳ ॥ ಮಾನವಾಧೀಶಅಮಾನಿನೀಮಣಿಯನ್ನು । ನಾನಾತಂತ್ರಾದಿನಿಮ್ಮವಶವಮಾಡುವೆನೂ ॥೧॥ ಯೆಂದಿಗೆನಿಮ್ಮಯಮುಖವನೋಡುವೆನೆಂದುಯಿಂದುವದನೇಮನದಿಕರಗುತಿರಬೇಕು ॥೨॥ ಎಂದಮಾತಿಗೆದೊರೆಯುಪಕ್ಷಿಯುಮುದ್ದಾಡಿ । ಸಂದೇಹವಿಲ್ಲಾದಕೆಳುಹಿದನಾಗಾ ॥೩॥ ಚಂದಾಡಿಪಕ್ಷಿಗಾಳೆಂದಾಗಿಪೋದವು। ಅಂದುತಮ್ಮಯಅನ್ನ ಹಾರಾವತೊರೆದು॥೪॥ ಅಷ್ಟರೊಳ್ದಮಯಂತಿಸೆಟ್ಟಾನೆತೆರಳಾಲು। ತನ್ನಸ್ತ್ರೀಯರುಸಹಿತಶೃಂಗಾರವನಕೆ ॥೫॥ ತರಳಬೇ

ಗಾಢಿಬಂದುತರುಣೀಯರೂಢಗೊಂಡು। ಸ್ಮರನಬಳೆಗಾವನ್ಪನೋಡುತ್ತಲಿರಲೂ ॥೬॥ ವ ॥ ಮುಂದೆಶೃಂಗಾರವನದವಿಸ್ತಾರವಂಕೇಳುತಿರ್ದದಂತೆನೆ ॥ ಸೀಸಪದ್ಯ ॥ ಹಲಸುನೇರಳೆಮಾವುನೆಲಶಿರುವರುದ್ರಾಕ್ಷಿ। ಬಗೆಬಗೆಯವೃಕ್ಷಗಳುಪ್ರೊಳೆಯುತಿರಲೂ । ತೆಂಗುಅಡಿಕೆಯಮರವುಸಂಗತಿಖರ್ಜೂರ । ಅಂಗನೆಯತೊಡೆಗೆಸಮಾನವಾದಕದಳೀ । ಆಲಬ್ಯಾಲದಮರವುನೇಲಾದದಾಳಿಂಬಿ। ಲೀಲೆಯಿಂಬೆಳೆವುತಿಹಸುರಹೊನ್ನೆಮರವು । ಇಂತಪ್ಪವೃಕ್ಷಗಳಂಕಂತುರಾಯನಬನವುಅನಂತಗಳನೆಲ್ಲಪೇಳ್ವೆನಾನುವಿಲುಸಟಣೆಯುಹಂಸೆಗಳಪಾಕೆಗಾನವನುಸವಿಯಿಂದನುಡಿವಗಿರಗಿಣಿಗಳೆಸೆಯೆ। ಕಲಹಂಸೆಗಳುಪಕ್ಷಿನಲಿವುತಿಹಪಾರಿವಾಳಗಳು। ಸುಳಿದುಕೂಣಿರುವನವಿಲುಶೃಂಗಾರವನವೊಳು । ಯಿಾತೆರದಿನಲಿವುತಿಹಪಕ್ಷಿಗಳನೆಲ್ಲವನು । ಕಾತುರದಿನೋಡಿಕಡುಹರುಷದಿಂದ। ಇಂತೊಪ್ಪುವದಮಯಂತಿವಿಸ್ತಾರಗಳನೆಲ್ಲ। ಅನಂತವಿಧದಲಿಶ್ರೀಯರುವರ್ಣಿಸುತಲೀ ॥

ವ ॥ ಇಂತೆಂದು ಶ್ರೀಯರು ದಮಯಂತಿಯು ವರ್ಣನೆಯಂ ವರ್ಣಿಸುತಿರ್ದರದಂತೆನೆ.

ಕಂದ॥ಕಲಹಂಸಗಮನೆಕೋಗಿಲೆ।ಕಳೆನಡುವಿನಯ್ಮಿಕಾಂತಿಅಂಗಭಾಗಗಳಂ॥ ಪುಳಕಿಸುವಗಂಧಪರಿಮಳೆ। ಸುಳಮಿಂಚಿನಂತೆಪದ್ಮಿನಿಪ್ರೊಳೆಯುತಲಿರ್ಪಳೂ॥೧॥ಮಲ್ಲಿಗೆಯಮುವ್ವತುರುಬಿಲಿತುರುಬುತ। ಚಳ್ಳಗುರಂತಂನಮುಂಡೆಯಕುರುಳಂತಿದ್ದತ॥ ವುಲ್ಲಾಸದಿದಮಯಂತಿಯು ।ಹುಣ್ಣಿಮೆಯಚಂದ್ರನಂತೆಪ್ರೊಳೆಯುತಲಿರ್ಪಳೂ॥ ತೋಳಭಾಪಿಂಗರಕಾಲಲಿಕಿರಿ। ಪಿಲ್ಲಿವೀರಮುದ್ರಿಕೆಯುಹೊಳೆಯುತ॥ ತಾಳಯಸಗರಗಳುಕೊರಳೊಳು । ಬಾಲಾಂಕನಿಪ್ರೊಳೆಯುತಲಿರ್ಪಳೂ ॥ ಅಂಗನೆಯರೊಳತಿಸೊಬಗಿನ। ಶೃಂಗಾರದಸುಗುಣೆಸೊಗಸುಮದಗಜಗಮನೆಯು।ಅಂಗನೆಯರೆಲ್ಲವನಿತೆಶೃಂಗಾರವಮಾಡುತಲಿರ್ದರೆಲ್ಲಅತಿಸೊಬಗಿನೊಳು ॥೪॥ ಯಾವಿಧದೊಳುವರ್ಣನೆಯನುಭಾವೆಯರುವಿಸ್ತರಿಸುತಿರಲುಬಹುಸಂತೋಷದಿ। ಆನಾರಿದಮಯಂತಿಗೆ। ಧರಿಶಿದರಾಭರಣಗಳನ್ನುನಲಿಯುತಲಿರ್ದಳೂ ॥ ವ॥ ಆಸಮಯದ

ಲ್ಲಿ ದಮಯಂತಿಯ ಬಳಿಗೆ ಹಂಸಪಕ್ಷಿಗಳು ಬಂದವದೆಂತೆನೆ.

ರಾಗ ॥ ಹಂಸಪಕ್ಷಿಗಳೂಬಂದಾವೂಅತಿಶಯದಿಂದ । ಹಸಂಪಕ್ಷಿಗಳುಬಂದಾವೂ ॥ಪಲ್ಲವಿ॥ ಹಂಸೇಗಮನೆದಮಯಂತೀದೇವಿಯಬಳಿಗೆ। ಹಂಸೆಪಕ್ಷಿಗಳೂ । ಬಂದಾವೂ ॥೧॥ ಶೃಂಗಾರಭಾವದಿಂದಾಲಿಪಕ್ಷಿಗಳುಅಂಗಾಸುವರ್ನಭಾಯಾದಿ । ಮಂಗಳಾಂಗನೆಯಾದದಮಯಂತಿದೇವಿಯಬಳಿಗೆಕಂಗೊಳಿಸುವಪಕ್ಷಿಸುವಪಕ್ಷಿಸೊಗಸಿಂದಲಿಹಾಡಿ ॥ ಪವಳಾವರ್ನಗಳಿಂದಾಲಿಆಪಕ್ಷಿಗಳುಪೊಳೆವರತ್ನಂಗಳಿಂದಾಲಿಪವಳವರ್ನಾಂಗಿಯಾದ । ದಮಯಂತಿದೇವಿಯಬಳಿಗೆವಿಮಲದಿಂದಲಿಬಂದುನವಿಲುನಡೆಯಿಂದಾ॥೩॥ ಚಿತ್ರರೂಪುಗಳಿಂದಲೀ। ಆಪಕ್ಷಿಗಳುವಿಚಿತ್ರಕಾಂತಿಗಳಿಂದಾಲಿ। ರತ್ನಗಮನೆಯಾದದಮಯಂತಿದೇವಿಯಬಳಿಗೆಚಿಂತೆಯಿಲ್ಲದೆಬಂದುದಂತಿಗಮನೆಬಳಿಗೆ ॥೪॥ ಮುದ್ದುಮುಖಗಳಿಂದಲಿಆಪಕ್ಷಿಗಳುತಿದ್ದಿದಪ್ರತಿಮೆಯಂದದೀ । ಮುದ್ದುಮೋಹನೆಯಾದದಮಯಂತಿದೇವಿಬಳಿಗೆ । ಸದ್ದೂಯಿಲ್ಲಾದೆಬಂದುಸರಸಾವನಾಡುತಾ

ವ॥ ಇಂತೊಪ್ಪುವ ರಾಜಹಂಸೆಗಳಂ ದಮಯಂತಿ ಕಂಡು ಆಶ್ಚರ್ಯವಂ ಬಟ್ಟು ಆ ಪಕ್ಷಿಗಳಂ ಹಿಡಿದು ಮುದ್ದಾಡಬೇಕೆಂದು ತನ್ನ ಸಖಿಯರು ಸಹಿತ ಗಮಿಸಿದರದೆಂತೆನೆ.

ಯಕೆತಾಳ ॥ ಎಲ್ಲಾಸ್ತ್ರೀಯರುಕೂಡಿಮೆಲ್ಲಾನೆತಾವೆದ್ದು । ನಿಲ್ಲಾದೆಪಕ್ಷಿಗಳತ್ತಗುಳಿದರಾಗ ॥೧॥ ಯದೆಯಮೇಲಣಶರಗುತ್ತರಮಪೋಗಲುತ್ತಾವು। ಅದನುಕಾಣದೆಮುಂದೆವದಗಿಪೋಗುತಾಲಿ॥೨॥ ಹಾರಹೀರಾವಳೀತೋರಮುತ್ತಿನಸರ । ಸಾರತೂಗುತಲಿರೆಮಿಾರಿತಾವುನಡೆಯೆ ॥೩॥ ಯೆಲ್ಲಾಸ್ತ್ರೀಯರಕೂಡಿತಗುಳುತ್ತಾಬರುತಿರೆ। ನಿಲ್ಲಾದೆಪಕ್ಷಿಗಳೆಲ್ಲಾಪೋಗುತಲೀ॥೪॥ ಪೋಸಪಕ್ಷಿಗಳನ್ನುಪೋಗಲೀಸಾದೆಪೊಂಚಿ। ಆಗಶಿಕ್ಕೀದಾಪಕ್ಷಿಬೇಗಾದಿಂಪಿಡಿದೂ ॥೫॥ ಹಿಡಿದಪಕ್ಷಿಯತಂಮವಡತೀಗೆಕೊಡಲಾಗಿ। ಕಡುಪ್ರೀತಿಯಿಂದಲಿನೋಡಿದಳಾಗಾ॥ ನೋಡಿಯಾಪಕ್ಷಿಯಾಗಾಡಾದಿಂಮುದ್ದಾಡಿ॥ಮಾಡಿಸಂತೋಷವನು ಮತ್ತೆನಲಿದಾಡೀ ॥೬॥ ಅನಿತರೊಳಗೆಪಕ್ಷಿವನಿತೆಯರೂಪುನೋಡಿ॥ಮ

ನಡೆಸಂತೋಷವಮಾಸಿತಾನಾಗಾ ॥೮॥ ನಳರಾಜಚಂದ್ರಾನಕೆಳೆಯು ನೆಲ್ಲವತಿಾನೂ। ಸುಳಿಗುರುಳಿನಬಾಲೆಯಕೂಡೆತಾಪೇಳಿ॥೯॥ ವ॥ ಈಪ್ರಕಾರದಿಂದ ಪಕ್ಷಿರಾಜನು ದಮಯಂತಿಯ ಕೂಡೆ ನಳರಾಜನ ವೃತ್ತಾಂತವಂ ಪೇಳುತ್ತಿರ್ದನದೆಂತೆನೆ. ದ್ವಿಪದೆ॥ ಕೇಳೆಲೆದಮಯಂತಿಕೇಳೆನ್ನಮಾತು। ನಳಚಕ್ರವರ್ತಿಯನಟಣೆಯಂಪೇಳ್ವೆ। ಕೆಳೆಯುಳ್ಳಕಾಂತೆನೀಕೇಳುಪೇಳುವೆನು। ನಾರೀಮಣಿನಿನ್ನರೂಪಿಗೆಪೋಲ್ವಧೀರನಳರಾಜ ಮನ್ಮಥರೂಪಿನವನು। ಕಾಮಿನೀಕಂದರ್ಪಕಳೆಯುಳ್ಳಭೂಪ। ಸಾಮಾನ್ಯದವನಲ್ಲಸರಸಿಜನೇತ್ರೆ॥ಅಂತಪ್ಪನಳರಾಜಚಂದ್ರನನಿನಿಗೆ। ಸ್ವಂತದಾಪುರುಷನಮಾಡಿಕೊಡುವೆನೆನ್ನ। ಇದಕೆನಂಬಿಕೆಯಿನ್ನು ಮಾಡಿಕೊಡುತಿಹೆನು। ಮದನಾಂಗಿಮತ್ತೊಂದುಮಾತುಪೇಳುವೆನು। ಹದಿನಾಲ್ಕುಲೋಕವಂಅರಸಿನೋಡಿದೆನು। ಚದುರೆನಾನಂತಪ್ಪಪುರುಷನಕಾಣೆ। ನೋಡಿದೆನುಮನ್ಮಥನನೋಡಿದೆನುಹರಿಯ॥ ನೋಡಿದೆಇಂದ್ರನನೋಡಿದೆಶಶಿಯ। ರೂಢಿಯೊಳಗಂತಪ್ಪಪುರುಷನಕಾಣಲರಿಯೆ। ಕಡುಚೆಲ್ವರೂಪಿನನಳರಾಜನಮ್ಮಾ। ರೂಢಿಯೊಳನಿನ್ನಪುರುಷನಮಾಡಿಕೊಡುವೆ। ಈಪಕ್ಷಿಕೈಯ್ಯಲ್ಲಿಯೇನಾಹುದೊಯೆಂದು। ಚಪಲಾಕ್ಷಿನೀನುಚಿಂತೆಯಮಾಡಬೇಡ। ಯೆಂದಿಗೆನಿನ್ನಯಮುಖವಕಾಣುವೆನೆಂದು। ಚಂಧದಪುರುಷನುಕರಗುತಿರಬೇಕು। ಇನ್ನುನೀವಿಬ್ಬರುವಡಗೂಡೊತನಕ। ಕಣ್ಣಿಗೆನಿದ್ರೆಯುಬಾರದೆಂಯನಗೆ। ಯೆಂದುಪಕ್ಷಿಯುಪೇಳಿಕೇಳಿಸಂತಸದಿ। ಸಂತೋಷವಂಬಿಟ್ಟು ಮುಂದೊಂದುಪೇಳಿದಳೂ ॥

ವ॥ ಇಂತೊಪ್ಪುವ ಪಕ್ಷಿಯ ನುಡಿಗೆ ದಮಯಂತಿಯು ಆಶ್ಚರ್ಯವಂ ಪಟ್ಟು ಪಕ್ಷಿಯ ಮುದ್ದಾಡಿ ತಾನು ಹಿಡಿದಂತಾ ಪಟ್ಟುಬಿಟ್ಟು ತೊಡೆಯಮೇಲೆಇರಿಸಿಕೊಂಡು ಪಿನೆನ್ನುತಿರ್ದಾಳೂ.

ಜಂಪೆ ॥ ಓಹಂಸರಾಜನೆಆರಾಜದೇವೇಂದ್ರ। ಯೆಲ್ಲಿಯಿರುವನು ನೀನುಪೇಗೆಕಂಡಿರ್ದೆ ॥೧॥ ಅವನಿಗೂನಿನಗಿನ್ನುಸ್ನೇಹಹೊಂದಿದಬಗೆಯು। ವಿವರದಿಂಪೇಳುಂಯುಲ್ಲವನುನೀನೀಗ ॥೨॥ ಯೆಂದಮಾತಿಗೆಯಿಂತಸಂದೇಹವನುಬಿಟ್ಟು। ಚಂದಾದಿಂದವನವೃತ್ತಾಂತಪೇಳಿದು

ದು॥೩॥ಯೆಲೆನಾರಿಮಣಿಕೇಳಸೆಲೆಯನೆಲ್ಲವಪೇಳ್ವೆ।ಸುಲಲಿತಾಶೃಂಗಾರಸುಗುಣಗಂಭೀರಾ॥೪॥ ಧಾರುಣಿಯೊಳಾತನುವೀರಸೇನನಸುತನು। ವಾರಸನ್ನಿಭನವನವಿವರವನುಪೇಳ್ವೆ ॥ ॥೫॥

ವಚನ॥ ಇಂತೆಂದು ಆ ಪಕ್ಷಿಯು ನಳರಾಜನ ಪೂರ್ವವೃತ್ತಾಂತವಂ ಪೇಳುತಿರ್ದುದದೆಂತೆನೆ.

ಸಾಂಗತ್ಯ ॥ ನಿಷಧಾಪುರವುಯೆಂಬಾಪಟ್ಟಣವಾಳುವ । ವಸುಧೆಪಾಲಕವೀರಸೇನಾ ॥೧॥ ಸುತನಾದನಳಚಕ್ರವರ್ತಿತಾನೊಂದಿನ। ಅತಿಶಯದಮಂತ್ರಿಮಾನ್ನೆಯರ ॥೨॥ ವಡಗೊಂಡುಶೃಂಗಾರವನಕೆತಾಪೋದಾನು ॥ ಮನ್ಮಥರೂಪುಚೆನ್ನಿಗನೂ ॥೩॥ ಅಲ್ಲಿವಿನೋದದಿಚರಿಸುತ್ತಲಿರೆಭೂಪ। ಚೆಲ್ವನಾಪ್ರೋಗಿಸಿಕ್ಕಿದನೂ ॥೪॥ ವಾರಸನ್ನಿಭನೆನ್ನಹಿಡಿದುತಕ್ಕೈಸಾಲು । ಸೇರಿಆತನರೂಪುನೋಡಿ ॥೫॥ ಭೂರಿಸಂತೋಷವಾಯಿತುಯೆನ್ನ ಮನಸಿಗೆ । ನಾರಿನೀಕೇಳುಪೇಳುವೆನು ॥೬॥ ಅವನಿಗೆತಕ್ಕರಾಣೀಯುನಾನೀಗಾಲು । ಭುವನಾದೊಳ್ತರುವೆನೆಂದನುತಾಲಿ ॥೭॥ ವಾನಿನೀಹದಿನಾಲ್ಕುಲೋಕಾವಸುತ್ತೊತ್ತಿ। ಜ್ಞಾನಾದಿಂವಿಲ್ಲಿಗೆಬಂದೂ ॥೮॥ ಬಂದುನಿನ್ನಯರೂಪುನೋಡಾಲುನನಗೀಗ । ಸಂದೇಹವಿಲ್ಲಾಮನದೊಳಗೀ॥೯॥ ರೂಢಿಯೊಳ್ನಿನ್ನಂತೆಯಾರ ಕಾಣೇನು । ಗಾಡಿಕಾತಿಯೆಕೇಳ್ನೀನು ॥೧೦॥ ನಳಚಕ್ರವರ್ತಿಗೆಸರಿಯಾದಸ್ತ್ರೀನೀನು । ನಿನಗೆತಕ್ಕವನೆಳರಾಜ ॥೧೧॥ ಯೆಂದುನಿಮ್ಮಿಬ್ಬರಧರಣಿಯುಮೇಲಿನ್ನು । ಚಂದದಿಂಬ್ರಹ್ಮಪುಟ್ಟಿಸಿದಾ ॥೧೨॥ ನಿನ್ನಾನಿಮಿತ್ತ್ಯಾದಿ ನಾನಾಕಷ್ಟವಪಟ್ಟು । ಚೆನ್ನಿಗನಾವಶವಮಾಡುವೆನು ॥೧೩॥ ಎಂದೂಪಕ್ಷಿಯೂಪೇಳೆಆನಂದದಿಂದಾಲಿ। ವಂದಾರುಭುಜವಾಗಿಮನದಿ ॥೧೪॥ ಮಂದಗಮನೇತಾನುಪಕ್ಷಿಯುಸಂತೈಸಿ । ಚಂದಾದಿಂಕಳುಹಿದಾಳಾಗಾ ॥ ॥೧೫॥

ವಚನ॥ ಇಂತೆಂದು ನಳರಾಜನಿಗೂ ಪಕ್ಷಿರಾಜನಿಗೂ ಸ್ನೇಹವಾದೆಂತಾ ವೃತ್ತಾಂತವಂ ಪೇಳಲು ದಮಯಂತಿ ಅತ್ಯಂತ ಪರುಷಿತಳಾಗಿ ನಳರಾಜನಬಳಿಗೆ ಪಕ್ಷಿರಾಜನಂ ಕಳುಹಿಸಿದಳದೆಂತೆನೆ.

ಜಂಪೆ ॥ ಓಪಕ್ಷಿರಾಜೇಂದ್ರನಾನೊಂದುಮಾತನು । ಪೇಳ್ವೆಯಿಶಾ

ಗಲಿನಳರಾಜನನ್ನು ನನ್ನೊಳ್ ಸವಾ ॥೧॥ ಮಾಡದಿರ್ದೊಡೆಯನ್ನ ಪ್ರಾಣನಿಲ್ಲುವದಿಲ್ಲಗಾಢದಿಂಪೋಗುನೀನೆಂದಳಾದೇವಿ ॥೨॥ ಮಾರನೆಂಬಿಗೆಯನ್ನ ಗುರಿಯಂ ಮಾಡದೆ ನೀನು। ಧಾರುಣೀಶನಬಳಿಗೆ ಸೇರಿ ಈಕ್ಷಣ ದೀನನ್ನ ವೃತ್ತಾಂತವನು ಚೆನ್ನಾಗಿ ನೀ ಪೇಳಿ । ಮಾನಿನಿಯ ಮಾತು ನೀ ತಿಳಿದು ಬಹಪತನಕಾ ॥೪॥ ಹೃದಯದೊಳು ಪ್ರಾಣನಿಲ್ಲದೊಯಲಿ ಪಕ್ಷಿ ಮದನಬಾಣಕೆಗುರಿಯ ಮಾಡದಿರು ಯನ್ನಾ ॥೫॥ ಯೆಂದು ಪೇಳಲು ಪಕ್ಷಿ ಸಂದೇಹವನು ಬಿಟ್ಟು। ಇಂದುವದನೆಯ ಕೊಡೆ ತಾನೊಂದು ಪೇಳಿದುದೊ ॥೬॥ ಇಂದು ನಿನಗೆಯುಬಂದ ಕಷ್ಟವೆನ್ನದು ಕೇಳು। ಸಂದೇಹ ಮಾಡದಿರು ಯಿಂದು ಮುಖಿ ನೀನು ॥ ॥೭॥

ವ ॥ ಇಂತೆಂದು ಪಕ್ಷಿರಾಜನು ದಮಯಂತಿಯನ್ನು ನೀನು ಒಂಗಕ್ಕೊ ಯೋಚನೆ ಮಾಡಬೇಡವೆಂದು ಆಗ ನಳರಾಜನನ್ನ ಅನುಕೂಲವಂ ಮಾಡಿಕೊಂಡು ಶೀಘ್ರದಿಂದ ಬರುತ್ತಾ ಇದೇನೆಂಬದಾಗಿ ಬುದ್ಧಿಯಂ ಪೇಳಿ ಅಪ್ಪಣೆಯಂ ಕೈಕೊಂಡು ತನ್ನ ಪಕ್ಷಿಗಳು ಸಹಿತವಾಗಿ ನಳರಾಜನಬಳಿಗೆ ಹೋಗುತ್ತಿರಲು ಅನಿತರೊಳು ನಳಚಕ್ರವರ್ತಿ ಪಕ್ಷಿಗಳು ಬರಲಿಲ್ಲವೆಂದು ಚಿಂತೆಯಂ ಮಾಡುತಿರ್ದನೆ ದಂತೆನೆ,

ಯಾಲಪದ॥ ಧಾರುಣೀಶನಳರಾಜನು । ದಮಯಂತೀದೇವಿಯನೆನೆದು। ಘನದಚಿಂತೆಮಾಡುತಿರ್ದಾನೊ। ಆಭುವನಾಧೀಶ। ಭೀಮಸೇನಾನಸುತೆಯಾನೆನೆನೆದು।೧॥ ಅನ್ನಾನೀರುಬಿಟ್ಟೊ ತಾನುಚಿನ್ನಾಬಣ್ಣಾಬಿಟ್ಟೊ ನಳನು। ತನ್ನ ಶರೀರಜ್ಞಾನಾವಿಲ್ಲಾದೆ। ಆನಳಾರಾಜ ಕನ್ನೆಯಾಚಿಂತೆಯೊಳಿರ್ದಾನೊ ॥ ೨ ॥ ಗಂಧಾಪರಿಮಳಗಳನುಬಿಟ್ಟು। ಚಂದದಿ ಕಸ್ತೂರಿಯಬಿಟ್ಟು । ಅಂದಗೆಟ್ಟು ತಾನೊಯಿರುತಿಹನೊ। ಆನಳರಾಜ। ಮಂದಗಮನೆಚಿಂತೆಯಿಂದಾಲಿ॥೩॥ ಸೂಳೇರನಾಟ್ಯವನಬಿಟ್ಟು । ಮೇಳದಶ್ರೀಯರಬಿಟ್ಟು।ಬಹಳಕಷ್ಟಾಪಡುತಾಲಿರ್ದಾನು॥ ಆನಳಾರಾಜಾ। ತಾಳಿತಾನುಸತಿಯಾಚಿಂತೆಯಾ ॥೪॥ ಇಂತೊ ನಳರಾಜನಾಗ ಚಿಂತೆಯಿಂದಾತಾನಿರಾಲು । ದಂತಿಗಮನೆ ಪಿವರಾವೆಲ್ಲನನೊ। ಆಪಕ್ಷಿಗಾಳು । ಸ್ವಂತವಾಗೀತಿಳದೂಬಂದೀತು ॥೫॥ ವ॥

ಇಂತು ನಳರಾಜನು ಪಕ್ಷಿಗಳು ಬರಲಿಲ್ಲವೆಂದು ಚಿಂತಿಸುವ ಸಮಯ ದೊಳು ಪಕ್ಷಿಗಳು ಬಂದವದೆಂತೆನೆ .

ರಾಗ —ಸುರಟಿ ॥ ರಾಜಹಂಸೆಗಳುಬಂದಾವೂ ನಳರಾಜನಬಳಿಗೆ । ರಾಜಾ ॥ ಪಲ್ಲವಿ ॥ ಮಾತುಕಥೆಯಾತಿಲಿದೂ । ಆಪಕ್ಷಿಗಳುನೀತಿಯಿಂದಾಲಿ ಬಂದವೂ ॥ ಜಾತಿನಾಯಕನಾದ ನಳಚಕ್ರವರ್ತಿಯ ಬಳಿಗೆ । ಪ್ರೀತಿಯಿಂದಾಲಿತಾವೂ । ಸ್ವಾತಿಮುತ್ತುಗಳಂತೆ ॥ ೧ । ರಾಜಾಪಟ್ಟುಗಳಿಟ್ಟು । ಆಪಕ್ಷಿಗಳೂ । ಸಹಜಾದಿಂದಾಲಿ ಬಂದಾವೂ। ರಾಜಶೇಕರನಾದ ನಳಚಕ್ರವರ್ತಿಬಳಿಗೆ ॥ ತೇಜಾದಿಂದಾಲಿಬಂದೂ। ರಾಜಿಸಿಕೊಣಿಯುತ ॥ ರಾಜಾ ॥ ೨ ॥ ಏಕಾಂತಮಾತನಾಡಿ । ಆಪಕ್ಷಿಗಳೂ । ಜೋಕೆಯಿಂದಾಲಿ ಬಂದಾವೂ । ಲೋಕನಾಯಕನಾದ ನಳಚಕ್ರವತಿಯಬಳಿಗೆ । ಪಂಥದಿಂದಾಲಿಬೇಗಾ, ।೩। ಇಂದುಮುಖಿಯರಾ ಹೊಂದಿಸಿ । ಆಪಕ್ಷಿಗಳೂ, ಜೊತೆಯಿಂದಾಲಿಬಂದಾವೂ । ಯಿಂದುಸನ್ನಿಭನಾದ ನಳಚಕ್ರವರ್ತಿಬಳಿಗೆ । ಮಂದಗಮನೆ ವಾರ್ತೆಯಿಂದು ಪೇಳುವೆನೆಂದು ॥ ರಾ ॥ ೪ ॥ ವ ॥ ಇಂತು ಆಪಕ್ಷಿರಾಜನು ನಳರಾಜನಬಳಿಗೆಬಂದು ಸಾಷ್ಟಾಂಗದಿಂದೆರಗಿ ಏನೆನ್ನುತ್ತಿರ್ದಾವೂ

ಏಕತಾಳ ॥ ಯಾಕ್ಕೆಯ್ಯನಳರಾಜ ಪೇಳುವೇನೆಲ್ಲವ ॥ ಮಂದಗಮನೆಯೊಳು ಯಿಂದುಮಾತಾಡಿ ॥ ೧ ॥ ನಿಮ್ಮಮೇಲಿನಮನಸುಪುಟ್ಟಿ ಶಿಬಿಂವನು । ಚಿನ್ಮಯಾರೂಪನೆ ಚೆನ್ನಾಗಿಕೇಳು ॥೨॥ ಅವಳಚೆಲ್ವಿಕೆಯನ್ನು ಪೇಳುವರಳವಲ್ಲ । ಪವಳವರ್ಣಕೆಕೇಳುಕವಲಿಲ್ಲದಂತೆ ॥ ೩॥ ತೊಡೆಯುಕದಳೀಕಂಬನಡುವುಸಿಂಹಗಳಂತೆ । ಮಡದಿಚಲ್ವಿಕೆಯ ನುಪೇಳುವೆಕೇಳೂ ॥೪॥ ಇಂದ್ರನೀಲವುಪೋಲ್ವಯಿಂಪಾದಕುರುಳ್ಗಳು ॥ ಚಂದ್ರಬಿಂಬಾವುಪೋಲ್ವಸಲಿಮುದ್ದುಮುಖಾವು ॥ ೫ ॥ ಬಿಳಿಯನ್ನೈದಿಲೆಯಂತೆ ಬೆಳಕುಕಣ್ಣುಗಳಸೆಯೆ ॥ ಅಲರವಿಲ್ಲಾನಿಗೆವಿಹಾಟಾದವುಬುರ್ಗಾಳು ॥ ೬ ॥ ಕಟ್ಟಾಣಿಚಿನ್ನಕ್ಕೆಕಳೆಯುಳ್ಳದೇಹವುಯಿಟ್ಟಕನ್ತುರಿಬೊಟ್ಟುದಿಟ್ಟದಿಂದಿಹಳೂ ॥ ೭ ॥ ಇನ್ನುವರ್ಣನೆಯನ್ನು ಚೆನ್ನಾಗಿಪೇಳುವೆ । ಮನ್ನಾಣೆಯಿಂದವಲಿ ಚೆನ್ನಿಗಧೊರೆಯೆ॥ ೮ ॥

ವ ॥ ಪಕ್ಷಿಗಳುದಮಯಂತಿಯ ವರ್ಣನೆಯನ್ನು ವಿಸ್ತಾರವಾಗಿಪೆ

ಳುತಿರ್ದವದೆಂತೆನೆ.

ತ್ರಿಸುಡೆ ರೂಪಕತಾಳ ॥ ಬಟ್ಟಕುಚಬಲನಡುವುಬಳಕುತಾಯಿ ಟ್ಟಆಭರಣಂಗಳುಲಿಯುತ ॥ ಪುಟ್ಟಬರಹದಶೀರೆಚೆನ್ನದಕರಗುವು ತ್ತುಗಳ್ಮೆರವುತಾವನಿತೆದಮಯಂತೀ ॥ ೧ ॥ ತೋಟ್ಟುಚಂದುರಗಾವಿ ಕುಪ್ಪುಸತೋಳಭಾಪುರಿನಲಿಯುತಾಗಟ್ಟ । ನೀಳದಬಳೆಯುವಜ್ರದ ತಳುಕುಮುತ್ತುಗಳೊಪ್ಪುತಾ । ವನಿತೆದಮಯಂತೀ ॥ ೨ ॥ ಮೊಲ್ಲೆಮ ಲ್ಲಿಗೆಜಾಜಿಸೊಂಪಿಗೆಸರವುತುರುಬಿಲಿತುರುವುತಾ ॥ ಪಲ್ಲವಾಧರದಂತೆ ಪಂಕ್ತಿಯುಹೊಳವಕಣ್ಣುಗಳೊಪ್ಪುತ । ವನಿತೆದಮಯಂತೀ ॥ ೩ । ಸಲ್ಲಲಿತದಳಿನೆಗೆಯುಬೀರುತ ಸಾದುಬೊಟ್ಟುಗಳ್ಮೆರವುತಾಮೆಲ್ಲನೆ ॥ ಅಡಿಇಡುತಇದ್ದಳು ಮೆರಗುಕಾಂತಿಯು । ಪೊಳೆವುತಾವನಿತೆದಮ ಯಂತಿ ॥ ವ ॥ ಇಂತೆಂದು ರಾಜಹಂಸೆಯು ವರ್ಣನೆಯಂ ಪೇಳಿ ಮತ್ತೇನನ್ನುತಿರ್ದುದೂ.

ದ್ವಿಪದೆ ॥ ಧರಣೀಶಕೇಳುಆದಮಯಂತಿಗಿನ್ನು । ನಿನ್ನರಾಜ್ಯದ ತೇಜನಿನ್ನ ಪ್ರತಾಪವನು ನಿನ್ನರೂಪಿನವಿಭವನಿನ್ನಲಾವಣ್ಯ । ನಿನ್ನ ಪ್ರತಾಪವುನ್ನಿಸೌಂದರ್ಯ । ನಿನ್ನ ಪ್ರಖ್ಯಾತಿಯು ವರ್ಣಿಸಿಪೇಳಲು ನಾನು । ಆತರುಣಿಕೇಳಿಸುತಸದಿ ಹೊಂದಿವುಲ್ಲಾಸ । ದಿಂಮನಸು ಪುಟ್ಟಿಸಿಬಂದೆ । ನಿನ್ನೊಶವಮಾಡಿದೆನುನಿನ್ನಾಣೆಕೇಳು ॥ ಇನ್ನುಪ್ಯಾ ಲಿನನ್ನಮಾತನುನಂಬುನರನಾಥನೀನು ॥ ಇದಕೆಸಾಕ್ಷಿಗಳುಹರಿಹರ ಬ್ರಹ್ಮದೇವರುಗಳು । ಸೂರ್ಯಚಂದ್ರರುಸಾಕ್ಷಿಸುರರಲ್ಲಸಾಕ್ಷಿ । ನಾಳೆನೀ ದಮಯಂತಿಕಲ್ಯಾಣವಾಗಿ । ಕೂಡಿರುವಸಮಯದಲಿನೀನೀಗಸಂದೇ ಹಪಡಬ್ಯಾಡಭೂನಾಥಯೆಂದು । ಹಂಸೆಯುಪೇಳಿಚಂದದಿಂದಾಗ । ಅಪ್ಪಣೆಯುತಕೊಂಡುಆಪಕ್ಷಿಇಂದೀವರಾಕ್ಷಿಬಳಿಗೆತೆರಳಿದುದೂ ॥

ವ ॥ ಇಂತಪ್ಪರಾಜಹಂಸೆಗಳು ವಿಧರ್ಭಾಪುರಿಗೆಬರುವನಿತರೊಳು ಆದಮಯಂತಿಪಕ್ಷಿಗಳುಬರಲಿಲ್ಲವೆಂದುಚಿಂತಿಸುತಿರ್ದಳದೆಂತೆನೆ

ಜಂಪೆ ॥ ಮನಸಿನಲಿದಮಯಂತಿಆಮಹೀಪಾಲನ । ಘನಚಿಂತೆ ಯುಬಿಡಳುತ್ತಲಿರಲೂ ॥ ೧ ॥ ತನ್ನ ಪ್ರಾಣಸಖಿಯರನುತಪ್ಪದೇತಾನೋ ಡಿ ಇನ್ನು ಮನದೊಳಗೊಂದುಮಾತನಾಡಿದಳೂ ॥ ೨ ॥ ಆಪಕ್ಷಿರಾಜತಾ

ನ್ಯಾಕೆಬಾರದೆಪೋದೆ। ಈತಾಪವನುಹ್ಯಾಗೆನಾತಾಳಲಪ್ಪಾತಮ್ಮಜಾ
ತಿಪಕ್ಷಿಗಳಕೆಂಡುತಾಪಾಡಲೂ । ನನ್ನ ಚಿಂತೆಯು ಮರತುತಾಹೋ
ಯಿತೇನೊ ॥ ೪ ॥ ಅಲ್ಲದಿರ್ದರೆಯಿನಾಗನನ್ನವೃತ್ತಾಂತವನು । ಯಲ್ಲ
ವನುಪೇಳಿತಾಬರುವದೊಕಾಣೆ ॥೫॥ ಯನ್ನ ಕೈಯೊಳುಶಿಕ್ಕಿತಪ್ಪಿಪಾ
ತುಗಳಾಡಿ । ಬಿಡಿಸಿಕೊಂಡಿನ್ನುತಾಯೆಲ್ಲಿಪೋದಪುದೊ ॥೬॥

ವ ॥ ಇಂತೆಂದುಚಿಂತೆಯುಂಬಿಟ್ಟು ಮದನಬಾಣಕ್ಕೆ ಗುರಿಯಾಗಿ
ಯಿರುವಂತಾ ದಮಯಂತಿಯು ವಿಸ್ತಾರವಂಪೇಳ್ವೆನೆಂತೆನೆ

ಏಕತಾಳ ॥ ಕಾಮಾನಬಲಗಳುನೇಮದಿಂದಲಿಬಂದೂ । ಆಮೋಹ
ನಾಂಗಿಯಾಬಳಸಿದಾವಾಗ ॥ ೧ ॥ ಪಕ್ಷಿಯದಂಡಾಗಪುಷ್ಪಬಾಣಗಳಿಂ
ದಮತ್ತೆ । ಮನ್ಮಥಬಂದುನಿಂತಾನಾಗಾ ॥೨॥ ಬಂದುಮನ್ಮಥನೋಡಿ
ಚಂದದಿಂಬಾಣವ । ಯಿಂದೂವದನೇಮೇಲೆಯೆಸೆಯೆಅಕ್ಷಣದೀ ॥ ಗು
ರಿಯಿಂದಬಾಣವೊದೇಹಕ್ಕೆತಾಕಲು ಸ್ಮರಣೆಯುತಪ್ಪಿಯು ತಾನುಕ
ರುಗುತಿರಲಾಗಾ ॥ ೪ ॥ ನಿಲ್ಲಲಾರದೆಬಾಲೆತಲ್ಲಣಗೊಳುತಲೀ ॥ ಫುಲ್ಲ
ನಾಭನಬಾಧೆನಿಲ್ಲಲಾರದೆಂದು ॥೫॥ ಮತ್ತೆಮನ್ಮಥನಾಗಮಡದಿಮೂ
ರ್ಛೆಯುಮಾಡಿ । ಹತ್ತರದವರೆಲ್ಲಕರಗುತಲಿರಲೂ ॥೬॥ ಉಪಚರಿಸು
ವರಿನ್ನು ಅಪರಿಮಿತಸ್ತ್ರೀಯರೂ । ಕೃಪೆಯಿಂದತರುಣಿಯುಬಳಸಿತಾ
ವಿಂತೂ ॥೭॥ ಪನ್ನೀರುಗಳಚಲ್ಲಿಮನ್ನಣೆಯಿಂದ ಚನ್ನಾಗಬೀಸುತಲಿ
ವಟ್ಟಿದರಿ ॥ ೮ ॥ ನಿಂನಾನಾಬಗೆಯುಶೈತ್ಯೋಪಚಾರಾದಿ ॥ ದಂತಿಗಮ
ನೆಯೆದ್ದುಮೂರ್ಛೆಯಾತಿಳಿದಾ ॥೯॥ ವ ॥ ಇಂತೆಂದು ದಮಯಂ
ತಿಯುಮೂರ್ಛೆಯಂತಿಳಿದುಇರುವನಿತರೊಳುಆಪಕ್ಷಿಗಳುಬರುತಿರ್ದ
ವೆಂತೆನೆ ರಾಗಭೈರವಿ ॥ ರಾಜಾಹಂಸೆಗಳೂಬಂದಾವುದಮಯಂತಿ
ಯುಬಳಿಗೆರಾಜಹಂಸೆಗಳೂಬಂದಾವು ॥ಪ॥ ಯಲ್ಲಪಾತುಗಳಾಡಿ । ಆಪ
ಕ್ಷಿಗಳೂವುಲ್ಲಾಸದಿಂದಾಬಂದಾವು । ದಂತಿಗಮನೆಯಾದದಮಯಂ
ತಿದೇವಿಯುಬಳಿಗೆ ॥೧॥ ರಾಜಾವಟ್ಟಾಗಳಿಟ್ಟು । ಆಪಕ್ಷಿಗಳೂ ಸಹಗಜಾ
ದಿಂದಲೀಬಂದಾವು ॥ ರಾಜವದನೆಯಾದದಮಯಂತೀದೇವೀಯುಬಳಿಗೆ
ಹಂಸೇಪಕ್ಷಿಗಳೂಬಂದಾವು ॥೨॥ ಪುರಾಷಾನಮಾಡಿಕೊಂಡುಆಪಕ್ಷಿಗಳು
ಹರುಷದಿಂದಾಲಿಬಂದಾವುಸರಸೀಜಗಮನೆಯಾದ ದಮಯಂತಿದೇ

ಯಬಳಿಗೆ ॥ ಹಂಸೆ ॥೩॥ ವಿನಯಾನವಮಾಡಿಕೊಂಡು ॥ಆಪಕ್ಷಿಗಳೆಘನೆ ದಿಂದಬಂದವಾಗಲೂ । ಮನಸಿಜನೇತ್ರೆಯಾದ ದಮಯಂತಿದೇವಿ ಯಬಳಿಗೆ । ಹಂಸೆಪಕ್ಷಿಗಳೂಬಂದಾವೂ ॥೪॥

ವ॥ ಇಂತೆಂದುಪಕ್ಷಿಗಳುದಮಯಂತಿದೇವಿಯಬಳಿಗೆಬಂದುವಿನೆ ನ್ನುತಿರ್ದಾವೂ ಜಂಪೆ ॥ ಓರಾಜವದನೆನಿಮ್ಮಮ್ಮಕ್ಷಿತೀಶನಿಗೆಪೋಗಿ॥ ನಿನ್ನಗುಣಗಳನ್ನೆಲ್ಲವನೆನೆಯಮಾಡಿ ॥೧॥ ನಿನ್ನಮಾತುಗಳೆಲ್ಲಚೆ ನ್ನಾಗಿಪೇಳಿ । ಅನ್ನರನುನೋಡದಹಾಗೆಮಾಡಿನಾಬಂದೆ॥೨॥ ಇನ್ನು ವಸ್ತ್ಯಾಳನೀನುಅವನಮದುವೆಯುಆಗಿ ಚೆನ್ನಾಗಿಬಾಳಮ್ಮ ಕನ್ನೆದಮ ಯಂತಿ ॥೩॥ ಸಕಲಸೌಭಾಗ್ಯಗಳಸಂಪತ್ತಿನರಿನೀನು । ಸುಖದಿಂ ದಬಾಳೆಂದುಸಖಿಯರಸಹಿತವಾಗಿ ॥೪॥ ಹೇಳಿಬರುವೆವುತಾಯೆಬೇಗ ದಿಂದಲಿನಾವು । ಆಗಪಕ್ಷಿಗಳೆಲ್ಲಪೋದವಾಕ್ಷಣದಿ ॥ ವ॥ಇಂತೆಂದು ಪೇಳಿ ತಮ್ಮನಿವಾಸಕ್ಕೆ ಪೋಗಲು ಅತ್ತಲಾ ಮದನಬಾಣಕ್ಕೆ ಗುರಿ ಯಾಗಿ ಚಿಂತೆಪಡುವ ವಿಸ್ತಾರವಂ ಪೇಳ್ವೆನದೆಂತೆನೆ .

ಯಾಲಪದ ॥ ಅಲ್ಲಿಆಗಾನಳರಾಜಾನಿಸ್ಸಾದಚಿಂತೆಮಾಡುತ । ಪು ಲ್ಲಶರನಾಬಾಣಕ್ಕೆಗುರಿಯಾಗಿ । ಆನಳರಾಜಾ । ಪುಲ್ಲಲೋಚನೆಚಿಂತೆ ಯಿಂದಲಿ ॥೧॥ ಅನ್ನಾಹಾರವೆಲ್ಲಾತೋರದು । ಮುನ್ನುಮಾಡುವನಿ ದ್ರೆತೊರದುತನ್ನೊಳುಚಿಂತೆಪಡುತಾಲಿ । ಆನಳರಾಜಾ ॥ ಪನ್ನಗಾವೇ ಣಿಯುನೆನವುತಾ ॥೨॥ ಮಾತುಮಾತಿಗೆದಮಯಂತೀ । ದಮಯಂ ತಿಯನೂತಲಿಕಾಮಾತುರದೀಕರಗೂತಿರ್ದಾನೂ । ಆನಳರಾಜಾ । ನೀತಿತಪ್ಪೀಮಾತನಾಡುವಾ । ಮಂತ್ರಿಯೊಡನೆಮಾತಾಡ । ಮಂದಿ ಮಾಬಲಗಳನೊನೋಡ । ಕಾಂತೆಕಾಂತೆಕಾಂತೆಯೆನುತಲೀ । ಅ ನುತರಾಜಾಭ್ರಾಂತಿಯಿಂದಾಮಾತನಾಡುವಾ ॥ ೪ ॥ ಸಿಂಹಾಸನಕೆ ಪೋಗಲಿಲ್ಲದವಿಚಾರವಿಲ್ಲಾ ॥ ಬಂಟರಿಗೆಸಂಬಳಕೊಡಲಿಲ್ಲಾ । ಆ ನಳರಾಜಾ । ಧಿಟ್ಟತಪ್ಪಿಮಾತನಾಡುವಾ ॥೫॥ ನೂಳೆರನಾಟ್ಯವಬಿಟ್ಟು ಮೇಳದಸ್ತ್ರೀಯರಬಿಟ್ಟು । ತಾಳಲಾರದೆಚಿಂತೆಯಿಂದಾಲೀ । ಆನಳ ರಾಜಾ ॥ ಬೀಳಬಿನಗೂಮಾತನಾಡುವಾ ॥ ವೀಣೆಗಾಳನೂನುಡಿಸಲೊ ಲ್ಲ ಜಾಣತನವೂಮೊದಲೇಯಿಲ್ಲಾ ॥ ಯೇಣಲೋಚನೆಚಿಂತೆಯಿಂ

ದಾಲಿ । ಆನಳರಾಜಾ । ತ್ರಾಣಗೆಟ್ಟೂವಮಾತಾನಾಡೂವಾ । ಇಂ
ತುನಳರಾಜಾನಿರಲೂ । ಚಿಂತೆಪಟ್ಟುಮಂತ್ರಿತಾನೂ । ಅಂತರಂ
ಗದಬುದ್ಧಿಹೇಳಿದಾ ॥ ಆನಳಾನಿಗೆ । ಕಂತುಹರನಾಬಾದೇ ಬಿಡಿಸಿ
ದಾ ॥೮॥ ವಸುಮತಿನೀನಿಂತೂಕಗಾ । ಹಸಗೆಟ್ಟುಚಿಂತೆಯಬಿಟ್ಟು।
ಶಶಿಮುಖಿಯಚಿಂತೆಯಮಾಡುವರೆ । ಓನಳರಾಜಾ । ವಶಮಾಡಿಕೊ
ಡುವೆನಾಕೇಳೈಯ್ಯಾ ॥೯॥

ವ ॥ ಇಂತೆಂದು ಮಂತ್ರಿಸುತ್ತೇನೆನ್ನುತಿರ್ದ್ದಾನು. ಕಂದ ॥ ಕಂ
ತುಸಮರೂಪನಿನ್ನಯ । ಚಿಂತೆಯಬಿಡುನಾನುಪೋಗೀಧೊರೆಯೆ
ಡೆಗಂದಂತಿಗಮನೆಯ ನಿನ್ನಯ । ಸ್ವಾಂತದವನಿತೆಯನುವಾಡಿ
ಕೊಡುವೆನುಬುದ್ಧಿದೀ. ವ ॥ ಇಂತೆಂದು ನಳರಾಜನಿಗೆ ಧೈರ್ಯವ
ನ್ನು ಹೇಳಲು ನಳರಾಜನು ರಾಜ್ಯವಂ ಪರಿಪಾಲನೆಯ ಮಾಡಿಕೊಂ
ಡು ತನ್ನ ಅಂತರಂಗದಲ್ಲಿ ಚಿಂತೆಯಿಂದಿರಲು ಅತ್ತಲಾದಮಯಂ
ತಿಯ ವಿರಹತಾಪ ವಿಸ್ತಾರವಂ ಹೇಳ್ವೆನದೆಂತೆನೆ.

ಸಾಂಗತ್ಯ ॥ ಅಲ್ಲೀಆಭೀಮರಾಯನಸುತೆಯು । ತಾನುತಲ್ಲಣಿಸು
ತಕಾಮಶರದೀ ॥೧॥ ನಿಲ್ಲಲಾರದೆಬಾಲೆಮೂರ್ಛೆ । ಯೊಳಿರುತಿರೆಯ
ಲ್ಲಾನಾರೀಯರುಪಚರಿಸೆ ॥ ೨ ॥ ಮೆಲ್ಲಾನೆಆನಾರಿಮೂರ್ಛೆಯುತಿಳಿ
ದೆದ್ದು । ನಿಲ್ಲಾದೆಸಖಿಯೊಳಿಂತೆಂದೂ ॥೩॥ ಆತ್ಮಾಸಖಿಯೆಕೇಳುಅ
ತ್ಮೇಶನಿಲ್ಲಿಗೆ । ಬಾರದಿರ್ದ್ದರನಾನುವುಳಿಯೆ ॥ ೪ ॥ ಧೀರಾನೆತೆಂದು
ತೋರೆಂದಆನಾರಿಯು । ದಾರಿತಪ್ಪಿದಮಾತಾನಾಡುವಳೂ ॥೫॥ ವನ
ಜಾಕ್ಷಿಗಳೀರೆನ್ನವಲಜನಿಲ್ಲಿಗೆ । ಕರೆದುತಂದರೆದೋಷವೇನೇ ॥೬॥ ಭರ
ದಿಂದಪೋಗಿನೀಗಲಾದರು । ವಲ್ಲಭನಿಲ್ಲಿಗೆಬಾರದೇಕಾರಣವೇನೆ ॥೭॥
ಕಟಕಟನಾನಿಂತಘಾಸಿಯಪಡುತಿರೆ । ಹ್ಯಾಗೆನೋಡುತಿರಿನಿರ್ದಯ
ದಿ ॥೮॥ ಹಸುಳೆಯಾನರನಿಂತಕಷ್ಟಪಡಿಸಲುಬ್ಯಾಡಿ । ಹೇಳಿನೀವ
ಸುಷೇವನುತಗೆ ॥ ೯ ॥ ಯಂದುಯಿಾಮೇರಪ್ರಳಾಪದೊಳಿರುತಿರೆ ।
ಚಲದ್ರುವದನೆಮೂರ್ಛೆಪೋಗೆ ॥೧೦॥ ಜಗಮೂರ್ಛೆಯುತಿಳಿದುಬೇ
ಗದಿಂದಲಿಆಗ । ಸೋಗಗಣ್ಣಿನಬಾಲೆಪೇಳಿದಳೂ ॥೧೧॥

ವ ॥ ಇಂತೆಂದು ಘನವನುತಾಪದಿಂದ ಮತ್ತಿಂತೆಂದಳೂ.

ಮಧ್ಯಮಾವತಿ ॥ ಯಾರನ್ನ ಮುನಿದೆಯೊ ಯನ್ನ ಪ್ಯಾಲೆ । ಯೆನ್ನಲೀ ಕಾಯಬೇಕೈಯ್ಯ ಮನ್ಮಥರೂಪನೆ ॥ ೧ ॥ ನಿನ್ನ ಬಳಗವನೆನ್ನ ಪ್ಯಾಲೆನಿಃಬಿಟ್ಟು । ಯನ್ನ ಕೊಲ್ಲಿಸಬ್ಯಾಡವೈಯ್ಯಾ । ಹೇಳುವೆನು ನಿನಗೆದಂಪ್ಯೆಯ್ಯಾ । ದಯೆವಿಟ್ಟುಯಿಂದೆನ್ನ ಸಲಹೂವಾರ್ಯೆಯ್ಯೋ ॥೨॥ ಪಂಚಬಾಣವತೊಟ್ಟು ನೀನೂ । ಕೊಂಚವನು ಮಾಡಿಕೊಲ್ಲುವರೆ ಮತ್ತಿನ್ನು । ಮುಂಚೆಕೊಂದನು ಪ್ರಾಣವನ್ನು । ಚಂಚಲವನುಬಿಟ್ಟು ಕಾಯೂನಿನ್ನು ಯಾಕೆ ॥೩॥ ನಿನ್ನ ಬಾಣದಘಾಯದಿಂದಾ' ಯಿನ್ನು ಪ್ರಾಣವನು ನಿಲ್ಲುವಾದಿಯಲ್ಲಾ । ಮನ್ನಿಸಿಕಾಯಬೇಕೈಯ್ಯಾ । ಅಚನ್ನ ಕೃಷ್ಣನಸುತನಾದ ಮಾರ್ವೈಯ್ಯಾ ॥೪॥ ಪುಷ್ಪಬಾಣಗಳಬಿಟ್ಟು ನೀಂ ಯನ್ನ ಕಟ್ಟರಿದು ಕೊಡಲು ಬ್ಯಾಡೈಯ್ಯಾ । ಸೃಷ್ಟಿಯೊಳು ನಿಮಿಗೆದಂಪ್ಯೆಯ್ಯಾ । ಯನ್ನ ಕಷ್ಟವನು ನೀನನ್ನು ಕಾಯೋಕಾಪ್ಯೆಯ್ಯಾ ॥೫॥ ಮಂದಿಮಾರ್ಬಲವೆಲ್ಲಕೊಡೀ । ಯನ್ನ ಕೊಲ್ಲುವದೆನೊಪ್ಪುಹುದೀ । ಚಂದವಲ್ಲವು ನೋಡಿಯಿಸಾ । ಬಂದೆನ್ನ ಸಲಹೈಯ್ಯೋ ಬಹುಚಂದಗಾರೂಧಿ ॥೬॥

ವ ॥ ಇಂತೆಂದು ವಿರಹತಾಪದಿಂದ ಮನ್ಮಥನು ಪೊಗಳಿ ಮತ್ತಿಂತೆಂದಳು. ಜಂಪೆ ॥ ಇಂತು ನಾನಾಬಗೆಯ ಮದನತಾಪಗಳಿಂದ । ಚಿಂತೆಯಿಂದಲಿ ಸಖಿಯರೊಳಿಂತೆಂದಳಾಗಾ ॥ ೧ ॥ ಯೆಲೆಸಖಿಯರೆ ನೀವು ನೆಲಿಯನಾದರು । ಹೇಳಿಸು ಗುಣನನು ಕರತಂದು ವುಳುಹಬೇಕೆಂದು । ಎಂದುಮಾತುಗಳಾಡಿ ಮಂದಮತಿ ಮನದೊಳಗೆ । ಅಂದು ಮಾತುಗಳಾಡಿಯಿಂದೀವರಾಕ್ಷಿ ॥೩॥ ಅಂದುಕಂಡ ನಾರಿಯರು ಹೃದಯದಲಿ ನಡುಗುತಲಿ । ಚತುರತನದಿಂದ ಶೈತ್ಯೋಪಚಾರವನು ಮಾಡೆ ॥೪॥ ದಾದಿಯರು ಶೈತ್ಯೋಪಚಾರವನು ಮಾಡಿದರೆ । ಜ್ಞಾನವಲ್ಲಟದಿಂದ ತಾಪೇಳ್ದಾಗ ॥೫॥

ವ ॥ ಇಂತೆಂದು ಮದನತಾಪದಿಂದ ದಮಯಂತಿ ದುಃಖವಂ ಮಾಡುತ್ತಿರಲು ತನ್ನ ಆಪ್ತಸಖಿಯರಂ ನೋಡಿ ಏನನ್ನುತಿರ್ದಾಳೆಂ:

ದ್ವಿಪದೆ ॥ ಆಸಖಿಮಣಿ ತಾನು ಅಂಗನೆಯರನೋಡಿ । ಕಣ್ಣಿನಲಿ ಮುದಕವು ಕರಗಿ ಜಾರುತಲಿ । ಕರಗಿನಿಂದೊರಸಿ ಮುನ್ನ ಸೆಯಿಂದಲಿ ಯು

ದೆಯಮೇಲಣಶರಗುಚಂಡದಿಂದಿರಿಸಿ । ಮುತ್ತಿನಸರಗಳುಮುದದಿಂ
ದಕಟ್ಟಿ ॥ ಚಿತ್ರದಿಂದರಿಸಿಕುರುಳ್ಗಳುಸರಿನೋಡಿಕುಶಲದಿಂತಿದ್ದಿ ।
ಮುದ್ದುಮುಖವನುನೋಡಿಮುದ್ದಾಡಿತಾನು ಚಿಂತೆಮಾಡಲಿಬ್ಯಾಡ
ಯೆಂದು । ಸಂತೈಸಿಮೇಲಾದಪರಿಮಳವುನೆಲೆಯಿಂದಧರಿಸಿ ॥ ಆ
ಲಲನಿಗೆಪನ್ನೀರುಜಲಕಂಮಾಡಿ । ಮಂಡೆಯನುಮುಡಿಗಟ್ಟಿ । ದುಂ
ಡುಮಲ್ಲಿಗೆಯು ಕಂಡಸುಪಿಗೆಯನುಚಲ್ವಿನಿಂದಿರಿಸಿ । ಗಂಡಕಸ್ತೂ
ರಿಪುನಗುಲೇಪನಂಮಾಡಿ ॥ ಯಿಂದೀವರಾಕ್ಷಿಯನುವುಪಚರಿಸುತಿರ
ಲೂ ॥ ವ ॥ ಇಂತೆಂದು ಆಸಮಯದಲ್ಲಿ ಸೂರ್ಯನು ಪಶ್ಚಿಮಾದ್ರಿ
ಗೆ ಬಿಜಯಂಗೈದರದಂತೆನೆ.

ತ್ರಿಪುಡೆ ॥ ಸೂರ್ಯನುಪಶ್ಚಿಮದಕಡಲಿಗೆ ಶೇರಿತಾನೂಪೊರಡಲೂ
ವಿಹಾರೆನಿಸಿತಾಬಂದುಹರಚಿತ್ತೆಧಾರುಣಿಯನೆಲ್ಲಾ ॥೧॥ ಖಗತತಿಗ
ಳುರೆಗೂಡುಪೊಕ್ಕುಪುದುಗುಡಿದಿಂದಾ । ಅಗಲೂಪಗಲುಪಕ್ಕಿಗೆಪ
ಕ್ಷಗಳುಮಿಗೆಸೊಗಸುಮುರಿಯು ॥೨॥ ಇರುಳುಚರಿಸುವಪಕ್ಷಿಯಲ್ಲವು
ನಲಿಯುತಿರಲೂ । ಇಳೆಯೊಳುಸುಲಭವಾಯಿತುನಮಗೆಯನುತಲಿ
ಖಳೆಗಳಂದಾ ॥೩॥ ತಾರಗಳುಭದೊಳಿಗೆತಾವಿನ್ಯು ತೋರಿಬುದವಾ
ಕ್ಷಣ । ಸಾರಮುತ್ತುಗಳಂತೆನಭದೊಳುಪೊಳೆಯುತಿರಲೂ ॥೪॥ ಕಪ್ಪ
ಸರ್ಪಗಳಲ್ಲಿತಿರುಗಲುಅತಿಕ್ಷೆಯಿಂದಾಆಗಲೂ । ಸರ್ಪಶಯನನಸುತ
ನೆಮಹಿಮೆಯುಮತ್ತೆಯನೂ ॥೫॥ ಬಾಲೆಯರುಶೃಂಗಾರವಾದರು
ಚಕೋರಪಕ್ಷಿಗಳಡಗ । ಧರೆಯೊಳುಮಾರನಾಹವಸಹನದಿತೋರಿ
ತಾಗ ॥ ೬ ॥ ಚೋರರಂತೆದೆಸೆದೆಸೆಗೆಹರಿದರೂಮಿರ್ಚತಾಪೊಲ್ಕ್ಷಣ
ಪೂರ್ವದೆಸೆಯೊಳುಚಂದ್ರನುದಿಸುತೆಯೇರಿಬಂದಾ ॥೭॥ ವ॥ ಆಸ
ಮಯದಲ್ಲಿ ಚಂದ್ರನುದಯವಾಗಲು ದಮಯಂತಿ ವಿರಹತಾಪದಿಂ
ದ ತಾಳಲಾರದೆ ಚಂದ್ರನಪ್ರಭೆಗೆ ಏನೆನ್ನುತಿರ್ದಾಳೂ.

ಏಕತಾಳ ॥ ಇಂದುಮುಖಿಯುಆಗಾಬಂದಾಳುಪ್ರಭೆಗನ್ನು । ಚಂ
ದ್ರನೋಡಿತಾನಿಂತೆಂದಳಾಗಾ ॥೧॥ ಚಂದ್ರದೇವರನಿನ್ನಚಂದದಳಿ
ಳಿಯನು । ಯಂದೂಯನ್ನಾಯಿಂತಾಕಷ್ಟಪಡೆಸುವಾನೂ ॥ ೨ ॥
ನಿನ್ನಅಳಿಯನಬಾಧೆಯಿನ್ನುನಾತಾಳಲಾರೆ । ಚನ್ನಾಗಿಕೇಳ್ಮೆಯನ್ಯಾ

ಶಶಿರಾಯನೀನೊ ॥ ೩ ॥ ನೀನಾದರೂಮತ್ತೆ ಹೇಳಬಾರದೆಯಿನ್ನು । ಮಾನಿನೀಯನ್ನು ಕಷ್ಟಪಡಿಸಬ್ಯಾಡೆಂದೂ ॥೪॥ ಯೆಂದುನಾನಾಬಗೆಯಿಂದಲಿ ಮರಗುತಾ । ಯಿಂದುವದನೆತಾನೂಚಿಂತೆಯಿಂದಿಹಳೂ ॥೫॥ ವ ॥ ಇಂತು ದಮಯಂತಿ ಮತ್ತೂ ವಿರಹತಾಪದಿಂದ ಪಿನನ್ನುತಿರ್ದಾಳೂ.

ಶ್ರೀರಾಗ ॥ ಮನಸುನಿಲಾದುಯನಗೆ ! ಪ್ರಾಣೇಶನೆಮನಸುನಿಲಾದು ॥ಪ॥ ಮನಸುನಿಲಾದುವಂದುನಿಮುಷಾಸ್ಮೈರಿಸಲಾರೆ । ಕನಶೀನೊಬ್ಬಂದೆನ್ನನೆರೆಯೊನೀನಳರಾಜಾ ॥ಅ॥ ॥೧॥ ಸಕ್ಕರೆಚಂದುಟಿಯ ಸವಿದುಯನ್ನ ಕಕ್ಕಾಸಕುಚಗಳಪಿಡಿದೆನ್ನ । ಬಿಗಿಯಪ್ಪಿ ತಕ್ಕೈಸಿಯನ್ನನುನೆರೆಯೊವೀನಳರಾಜಾ ॥೨॥ ಮದನಕೇಳಿಯೊಳೆನ್ನನೊಬೇಗಾದಿಬಂದೂ । ಚದುರಾತನದಿಂದಕೂಗಿಮದಗಜಗಮನೆಯೆ । ಬಾರೆಂಬಿಗಿಯಪ್ಪಿತಕ್ಕೈಸಿಯನ್ನನುನೆರೆಯೊನೀನಳರಾಜ ॥೩॥ ಕಾಮುಕೇಳಿಯೊಳೆನ್ನಾನುಬೇಗಾದಿಬಂದು । ಪ್ರೇಮದಿಂದಾಲಿಕೊಡಿಸಾಮಾಜಗಮನೆಯೆಬಾರೆಂದು । ಬಿಗಿಯಪ್ಪಿಬಂದುನೆರೆಯೊಯೆನ್ನಯಿಂದು ನೀನಳರಾಜ ॥೪॥ ಗಂಧಕಸ್ತೂರಿ ಪುನಗುಜವ್ವಾಜಿಯೆತೆಂದುಲೇಪವಮಾಡೀ । ಚಂದಿರವದನೆಯೆಬಾರೆಂದುಬಿಗಿಯಪ್ಪಿ । ಬಂದುನೆರೆಯೊಯೆನ್ನಯಿಂದುನೀನಳರಾಜಾ ॥೫॥ ಇಂತುನಾನಾಬಗೆಯಾಪ್ರಲಾಪದಿಚಿಂತೆಮಾಡುವದೇವಿಗೆ । ದಂತಿಗಮನೆಯರೆಲ್ಲಾವಡೆಗೂಡಿತಾವಿನ್ನು । ಸಂತೈಸದಿರ್ದಾರೀತೆಂದುತಾಳುವೆನಮ್ಮಾ ॥೬॥

ವ ॥ ಇಂತೆಂದು ವಿರಹತಾಪದಿಂದ ಪಿನೆನ್ನುತಿರ್ದಾಳು.

ರಾಗ-ಮುಖಾರಿ ॥ ಕಾಂತೆಕೇಳೆನ್ನ ಜನ್ಮಾಂತರದಸುಕೃತಫಲಯಿಂತಿಹುದೊಕಾಣೆ ॥ಪ॥ ದಂತಿಗಮನೆಯುಪ್ರೋಗಿಕಲತಾಳನೀನಿನ್ನೂಕಂತುಸಮರ ನನಳನಚಿಂತೆಯಲಿರುಗಲಹೇಳು । ಕರಗುತಿರೆಯನ್ನಮನುಪತಿಯಕರತಂಮತೋರಭೂಪನಕಾಂತೆ ॥೧॥ ಅಂಚೆಗಮನೆಯೆಪ್ರೋಗಿಪಂಚಬಾಣನತೆಂದು । ಪ್ರಾಣಪನೇಳೆಂದುಯೇಣಲೋಚನೆಯು । ನಾನಕಷ್ಟಗಳಿಂದಚಿಂತೆಯನುಮಾಡುತಿರೆ । ಪ್ರಾಣಧ್ವಲ್ಲಭಯರುಯೋಡಿಸಿದರಾಗಾ ॥ ೨ ॥ ಕಾಮಾನಬಾಧೆಯೊಳುಕರ

ಗುತಿರೆ ನನ್ನೊಡತಿನಾವೂ । ಸುಮ್ಮನೆಯಿಹುದು । ಅದು ನೀತಿಯು ಲ್ಲಾ । ಯಿಾವಮಾತುದೊರೆಗೆ । ಅರಹಲುಬೇಕುಯೆಂದೆನ್ನುತ । ವಾಮಾಕ್ಷಿಯರುಯೋಚಿಸಿದರಾಗಾಕಾಂತೆ ॥೩॥ ಹೊರಡಬೇಕೆಂದುವಾಮಾಕ್ಷಿಯರುಯೋಚಿಸುವ । ಅನಿತಸೂರ್‍ಯನುದಯವ್ಯಾಳ್ಯವಾಗೆ ಚಂದ್ರಾನಪ್ರಭೆಗಳು ಕುಂದಿತಾಸಮಯದೊಳು ಬಂದುಮುಡಲಕೆಂಪ್ರು ತೋರಿಸಿತುಅಗಾ ॥೪॥ ಮೂಡಚುಕ್ಕಿಯುಮೂಡೆಗಾಢದಿಂಕುಕ್ಕುಟವು ॥ ಜೋಡುಕೂಡಿಯೆತಾವುಕೂಗುತಿರಲಾರಾಡ್ಥಿಯಿಂಲೋಕಗಳುಬೆಳಕುತೂರಿದವಾಗ । ಮೂಡಿಬರುತಿರೆಸೂರ್‍ಯಪೂರ್‍ವಭಾಗದೊಳು ಜಾರ॥೫॥ಚೋರರುಯಲ್ಲಸೇರಿದರುತಮ್ಮನೆಯ । ವಾರೆಯಾದವುತಾರೆಯಲ್ಲಾಯಿನ್ನು ಘೋರಸರ್ಪಗಳೆಲ್ಲಸೇರಿದವು । ಹುತ್ತುವನುವಾರಿಧಿಯುಹೆಚ್ಚಿ ಕಲಿಯಾಗಿರ್ದುದಾಗ ॥೬॥ ತಾರೆಕಮಲಗಳುತಾವಿನ್ನುನಲಿಯುತಿರೆ । ನೈದಿಲೆರುತಾ ವಿನ್ನುಮುಖವಮುಚ್ಚಿ । ಅವೇಳೆಯಲ್ಲಿ ನರರೆಚ್ಚರಿಸಿತಾವಿನ್ನು । ದೇವಸ್ತುತಿಯನುಮಾಡುತಿರ್ದರಾ ಜನರೂ ॥೭॥ ಸ್ನಾನಜಪಗಳುಮಾಳ್ಪಮಾನವರುತಾವೆಲ್ಲ । ಓಂನಮಶಿವಯೆಂದುಹರಿಹರರನೆನೆದು ಜ್ಞಾನದಿಂದೆದ್ದು ಜಪತಪವತೀರಿಸಿಕೊಂಡುತಾವುತಮ್ಮಯಕೆಲಸಗಳಮಾಡುತಿಹರು ॥೮॥ ದಮಯಂತಿಮದುವೆಗೇಅಮರರೆಲ್ಲರುಕೂಡಿ । ಪ್ರೇಮದಿಂಪಿಡಿದ ಬೆಳ್ಳಿಯಕೊಡೆಗಳಂತೆ । ಮುದದಿಂದಸೂರ್‍ಯನುದಯಂಗೈದುಬಂದನೂ । ಆಮಹಾಪೂರ್‍ವಾದ್ರಿಪರ್ವತದಹೊರಗೆ ॥೯॥ ಅನಿತರೊಳು ಅಭೀಮಸೇನಧೊರೆಯುಂಬುವನುತಮ್ಮಜಪತಪಗಳತೀರಿಸಿಯೆತಾನು ।ತಮ್ಮಅಂತಃಪುರದಿಕುಳಿತಿರಲುಸಮಯದೊಳು । ದಂತಿಗಮನೆಯರೆಲ್ಲಪೋದರಾಕ್ಷಣದಿ ॥ ವ॥ ಇಂತುಆಸಮಯದಲ್ಲಿದಮಯಂತಿಯ ದಾದಿಯರು ಬಂದುಆಭೀಮಸೇನನೆಂಬೊಧೊರೆಗೆ ದಮಯಂತಿ ವೃತ್ತಾಂತವೆಲ್ಲವನ್ನು ದಾದಿಯರು ಬಿನ್ನಹವಂಮಾಡುತಿರ್ದರದೆಂತೆನೆ

ಜಂಪೆ ॥ ಓರಾಜದೇವೇಂದ್ರಓದಧಿಯಾಸಾಂದ್ರನೆ । ಕೇಳ್ವಿಂದ್ಯಾನಿನ್ನಕುವರಿಯುಬಿನ್ನಹವೇನೂ ॥೧॥ ವಂದುದಿನಶೃಂಗಾರವನಕ್ಕೆಹೋಗಲೂ । ಮತ್ತೆಚಂದದಿಂಪಕ್ಷಿಗಳುಬಂದವಾವನಕ್ಕೆ ॥೨॥ ಬಂದುಅ

ಪಕ್ಷಿಗಳುಚೆಂದದಿಂಕುಳಿತಿರಲು । ಮಂದಗಮನೆಯುನೋಡಿಬಿಡದೆ ಹಿಡಿತಂದೂ ॥೩॥ ಮುದದಿಂದಮುದ್ದಾಡಿಚದುರತನದಿಂನೋಡಿ ।ಸದನದಲಿಯರಿಸಿವೈದಡಚಿದಮುಯಂತಿ ॥ ೪ ॥ ಯಿಂತೆಪ್ಪಪ್ರೀತಿಯ ಲಿಯಿರಿಸಿಕೊಂಡಿರಲಾಗ । ಯಿಂತಿದನುನೋಡಿ ಇಂತೆಂದುತಾಪಕ್ಷಿ ವೀರಸೇನಸುತನುಧೀರನಳರಾಜನು । ಯಿರುವಂತರೂಪುರೇಖೆಯನು ನೋಡಿಪಕ್ಷೀ॥೬॥ಮರುಳುಪುಟ್ಟಿಸಿತಾವುಬರವಹೇಳಿನ್ನುಸರಸದಿಂಚದರಿಪ್ರೋದವುಚದುರತನದಿಂದ । ಅಂದಿನಂದದಿನಿಮ್ಮಮಗಳು ಅತಿ ಮೋಹದಲಿಬೆಂದು॥ಬೆಂಡಾಗಿಯಿರುತಿಹಳುಕೇಳುಭೂಪಾಲಾ ॥ ೮ । ಮನ್ಮಥನಬೈದು ತಾನೆಮ್ಮಹೊಯ್ವುಳಕೇಳಿ । ಕಮ್ಮಗೋಲ್ಲನ ಬಾಧೆ ಯೊಳುಕರಗುತಿಹಳೂ ॥೯॥

ವ ॥ ಇಂತೆಂದು ಭೀಮಸೇನನಕೊಡೆ ದಾದಿಯರು ಮತ್ತಿಂತೆಂದರು. ಏಕತಾಳ ॥ ಅವನಿಯುಮೇಲೆಬಿದ್ದು ಅತಿಮೂರ್ಛೆಹೋಗುವಳು । ಆಗಾಲೆತಿಳಿದೆದ್ದುಬೈದುಕೊಳ್ಳುವಾಳಹಾ ॥೧॥ ಯಿಂತಿಗೆಮಾಡಿದಶೈತ್ಯೋಪಚಾರವಹೇಳುವರಳವಲ್ಲಲತಿಶಯಭೋರೆಯೆ॥ ೨॥ಚಿಗುರುಯೆಲೆಗಳಂತಂದುಹಾಸಿಗೆಯನ್ನುಮಾಡೆಚಿಗುರುಬೋಣೆಯುಮಲಗಿಚಿಗುರುಪ್ರೊಗೆಯಾಯ್ತು ॥೩॥ ತಣ್ಣೀರುಮಡುವಿನೊಳ್ತಂದು ಕುಳ್ಳಿರಿಸಲೂ । ಮತ್ತೆತಣ್ಣೀರುದೇಹಕ್ಕೆಕಾಯ್ದುಕ್ಕುತಿರಲೂ ॥೪॥ ಮೇಲುಮುತ್ತಿನಸರಬಾಲೆಗೆಹಾಕಲು । ನೀಲಾದಮಣಿಯಾಯ್ತುನಿಜವುಕೇಳೈಯ್ಯಾ ॥೫॥ ಗಂಧಪರಿಮಳರಿಸಿಯಿಂದುವದನೆಗೆಧರಿಸಿ । ಕಂದಿತಾಕ್ಷಣವೆಕಸ್ತೂರಿಯಂತೆ ॥೬॥ ನಮ್ಮಕೈಯ್ಯಲಿಯಿನ್ನುಸಾಗದಾನಾರಿಯೆ । ನೆಲ್ಲಾವುಪೇಳ್ವೆವುಚನ್ನಾಗಿಕೇಳೂ ॥೭॥ ನಿನ್ನಾಮಗಳುನಿನಗೆಬೇಕಾಗಿಯಿದ್ದರೆ॥ಚನ್ನಿಗನಳರಾಜನನ್ನುಕರಸುವದೂ॥೮॥ ಯೆಲ್ಲಪೇಳಿದೆವಿಮಗೆಪಲ್ಲವಪಾಣಿಯು ।ಯಿನ್ನುಬದುಕುವಳಲ್ಲಚನ್ನಿಗಭೋರೆಯೆ ॥ ೯ ॥ ತಡವುಮಾಡಲಿಬ್ಯಾಡಪ್ರೊಡವೀಶಬೇಗದಿ । ತಡೆಯೂದೆಕರಸೂಆನಳರಾಜನನ್ನು ॥ ೧೦ ॥ ಹೇಳಿಬಾಲೆಯರೆಲ್ಲಾಮೇಳಿದಿಂದಲಿಪ್ರೋಗೆ । ತಾಳಿದಾಚಿಂತೆಯಾಭೂಲೋಲನಾಗಾ ॥೧೧॥

ವ ॥ ಇಂತೆಂದು ಸಖಿಯರು ಭೀಮರಾಯನ ಕೊಡೆ ದಮಯಂ

ತಿಯ ವಿಸ್ತಾರವಂ ಪೇಳಿಪೋಗಲು ಆ ರಾಯನು ಅತಿಚಿಂತೆಯಿಂದ ಯೇನೆನ್ನುತಿರ್ದಾನೊ.

ತ್ರಿಪುಡೆ ॥ ಹೆಣ್ಣುಮಕ್ಕಳಪಡದವಮಾನವಕಾರ್ಪಣ್ಯ । ಪಡುವಾಯೆಂಬವಚನವು । ಕಣ್ಣುಮುಂದೆತೋರಿತೀಗಲುಯೆಂದನಾಗಾ॥೧॥ ನನ್ನಯಾದೊರೆಗಳೆಲ್ಲರಕಣ್ಣುಮುಂದೆಯಿಹಾಗಲೂ । ಚೆಣ್ಣನಾಗಿಶಿರವಬಗ್ಗಿರುವಂತೆಯಾಯ್ತೂ ॥೨॥ ಆತನಿಲ್ಲದೆಯಿನ್ನುಧೊರೆಗಳುಯಾರುಯಿನ್ನೂಪುಟ್ಟರೆ । ಭೂತಳೇಶನನೆನೆಯಬಹುದೆಮತವೆತನಗೆ॥೩॥ ಅವರಕೈಕೆಳಗಿರುವಧೊರೆಗಳುಯಿನ್ನುನಾವೂ । ಯಿಪಾಕ್ಷಣಅವರನಾಕರಿಸದರೆಬರುವರೆಯೆಂದನಾಗಾ ॥೪॥ ಯೆಂದುತಮ್ಮರಮನೆಗೆಬೇಗದಿ ಚಂದದಿಂದಾಪೋಗಲೂ । ಸಂಧ್ಯಾಕ್ರಿಯನೇಮಗಳುತೀರಿಸಿಹೊರಟನಾಗಾ ॥೫॥ ಬಂದುಕುಳಿತನುರತ್ನಮಂಟಪದೊಳಗೆತಾನೊಹರುಷದಿ । ಚಂದದಿಂದೆಲ್ಲರನುಕರಸಿದಚದುರತನದೀ ॥೬॥ ಕರಸಿಪೇಳ್ದನುಯೆಲ್ಲಜನರೊಳುವರಸುತೆಯದಮುಯೆಂತಿವಾರ್ತೆಯು । ಬರವಸಪೇಳ್ದನುಯೆಲ್ಲವಕೆಂದಿಕೊಂದೀ ॥೭॥ ತನ್ನಕುವರಿಯುವಂದುದಿವಸವು ವನಕೆಪೋಗಿಆಡುತಿರ್ದಳು । ವಿನಯದಿಂದಲಿಹಂಸೇಪಕ್ಷಿಪಕ್ಷಿಯುವಾಲಿಬರಲೂ ॥ ೮ ॥ ಅದರೊಳೊಂದನುಹಿಡಿದುಕುವರಿಯುಮುದದಿ ಮುದ್ದಿಸುತಿರಲು । ಅಕ್ಷಣಚದುರತನದಲಿರಾಜಹಂಸೆಯುಪೇಳಿತಂತೆ ॥೯॥ ಮಾನವರುಮಾತಾಡುವಂದದಿವಿನಯದಿಂದಾಪಕ್ಷಿಯೂ । ನಯನುಡಿಯುವಮಾತಾಡಿಘನದೊಳುಪೇಳಿತಂತೆ॥೧೦॥ಇಳಯೊಳಗೆನಳರಾಜಚಂದ್ರನಕಳೆಯನೆಲ್ಲಾಪೇಳಲೂ। ತಾಳಲಾರದೆಬಾಲೆಮೂರ್ಛೆಯುಹೋದಳಂತೆ ॥ ೧೧ ॥ ಈತರವೃತ್ತಾಂತವೆಲ್ಲಪ್ರೀತಿಯಿಂದಾ । ಆಕೆಯಮೊತೆಯರುಬಂದೆಮಗೆಪೇಳ್ದರುನೀವುಕೇಳಿ ॥೧೨॥

ವ ॥ ಇಂತೆಂದು ಭೀಮರಾಯನು ತನ್ನ ಮಂತ್ರಿಮಾನ್ಯರುರಕೊಡೆ ಪೇಳಲು ಕೇಳಿ ಸಭೆಯವರು ಇಂತೆಂದರೂ.

ಜಂಪೆ ॥ ಜನನಾಥನಿಮಗಿಷ್ಟುಚಿಂತೆಯಾತಕೆಎಂದು । ವಿನಯದಿಂಮಂತ್ರಿಗಳುಪೇಳಿದರುಧೊರೆಗೆ ॥೧॥ ಯಿದಕಿನ್ನುನಾವೊಂದುವಿವರವನುಹೇಳುವೆವು । ಚದುರತನದಿಂಕೇಳುಮಡನಾರಿಯರಸೆ ॥೨॥

ಭೂಲೋಕದೊಳಗಿರುವಭೂಪಾಲರಿಗೆಯೆಲ್ಲ । ಹೇಳಿಸಲುಬೇಕುಮಗ ಳಿಗೆಮದುವೆಯೆಂದು ॥ ೩ ॥ ಯೆಂದಮಾತನುಕೇಳಿಚಂದದಿಂಭೂ ಪಾಲ । ವಂದಿಗೇಯಲ್ಲರನುವಡಗೊಂಡುಬರುವಾ॥೪॥ ಆಹುದುಯೋ ಚನೆಯೆಂದುಆರಸುಮೆಚ್ಚುವನಾಗ । ಆಕ್ಷಣದಿಚರರಂಆಗಕಳುಹಿದ ನೂ ॥೫॥ ಪೋದರಾಚರರುಗಳುಪ್ರೊಢವಿಪತಿಗಳಬಳಿಗೆ। ದೃಢದಿಂ ಪೇಳಿಬರುವೆವುಯೆಂದುಚರರೂ ॥೬॥ ಅತ್ತಪೋಗಲುಚರರುಯಿತ್ತ ಪಟ್ಟಣದರಸು । ಅರ್ತಿಯಿಂಕರಿಸಿದನುವೊತ್ತದಿಂಪ್ರಜೆಯಾ ॥೭॥ ಕರಸಿಪ್ರಜೆಗಳನ್ನೆಲ್ಲಾಪುರವಶೃಂಗರಿಸೆಂದು। ಬರದಿಂಪೇಳ್ದನಾನೃ ಪಕುಲೋತ್ತಮನು ॥ ಭೀಮರಾಯನುಆಗಲೇಪಟ್ಟಣವೆಲ್ಲ । ಶೃಂಗಾ ರವಮಾಡೆಂದುಡಂಗುರವುಹೊಯ್ಸೆ ॥೯॥

ವ ॥ ಇಂತೆಂದುಡಂಗುರವಹೊಯಿಸಲು ಆಪಟ್ಟಣದ ಜನರುಡಂ ಗುರವಾರ್ತೆಯಂ ಕೇಳಿ ಪಟ್ಟಣವಶೃಂಗಾರವಂ ಮಾಡುವವಿಸ್ತಾ ರವಂಪೇಳ್ವೆನದೆಂತೆನೆ.

ಯಕತಾಳ ॥ ಪುರದಾಜನರುಯೆಲ್ಲಾಪುರವಣಿಸಿಮನೆಗಳೂ । ಭ ರದಿಂದಶೃಂಗಾರರಚನೆಮಾಡಿದರೂ ॥೧॥ ಕಸ್ತೂರಿಪನ್ನೀರುಕಲಸಿ ಗೋಡೆಗಳೊಳು ವಿಸ್ತಾರದಿಂದಾಲಿಶೃಂಗಾರಿಸಿದರೂ ॥ ೨ ॥ ಹಸುರ ತೋರಣಗಳುಹಸವಾಗಿಕಟ್ಟಿತಾವು ॥ ಮಿಸುನಿಯಮೇಲ್ಕಟ್ಟುಕು ಶಲದಿಂಕಟ್ಟಿ ॥೩॥ ಕದಳಿಕಂಬಗಳನ್ನುಮುದದಿನಿಲ್ಲಿಸಿತಾವು ॥ ಚದು ರಿಂದಮುತ್ತಿನರಂಗೋಲಿಬರದೂ ॥ ೪ ॥ ಕುಂಕುಮಪನ್ನಿರುಕೊಡ ಗೋಡೆಗೆಪೂಸಿ। ಪೊಂಕಾನೆಚಿತ್ರಪ್ರತಿಮೆಯನ್ನುಬರದು। ಕಸ್ತೂ ರಿಕುಂಕುಮಪುಷ್ಪುಬೀದಿಗಳೋಳು । ಮತ್ತೆಹರಡಿದರಾಗಾ ಅರ್ತಿ ಯಿಂಜನರೂ ॥ ೬ ॥ ಯಿಂತೂತವ್ಮಯ ಮನೆಮನೆಗಾಳೋಳೆಲ್ಲ ರೂ । ಸಂತೋಷದಿಂದಾಲಿಸ್ರಂಗಾರಿಸಿದರೂ ॥ ೭ ॥ ಅನಿತರೊಳಗೆ ಪೋದಾಆಳುಗಳುತಾವಿನ್ನು। ಆಗಲೆಬಂದರೂಅತಿಶೀಘ್ರದಿಂದ ॥೮॥ ಬಂದುಚರರುತಾವುನಿಂದುಕರಗಳುಮುಗಿದೂ । ಚಂದಾದಿಂಪೇಳಿದ ರುಧೊರೆಭೀಮರೆಡೆಗೆ ॥೯॥ ಯಿಳೆಯಾಧಿಪತಿಕೇಳುನಳಚಕ್ರವರ್ತಿಬ ಳಿಗೆ । ಘಳಿಲನೆಪೋಗಿನ್ನುಪೇಳ್ದೆವಿಂತೆಂದೂ ॥ ೧೦ ॥ ಧೊರೆಭೀಮ

ರಾಯನವರಸುತೆದಮುಯಂತಿ । ಹರುಷಾದಮದುವಿಗೆಬರಬೇಕೆಂ
ದೆನಲೂ ॥ ಯಂದಮಾತನುಕೇಳಿಚಂದದಿಂನಳರಾಜ । ದೇಶಾಧಿಪ
ತಿಗಳಕೆರಿಸಿದನಾಗಾ ಕುಂತಳಬರ್ಬರಕೋಶಲಪಾಂಡ್ಯವುಕೊಡಗೂ
ಕೊಂಕಣಕಾಸ್ಮೀರಕಾಳಿಂಗಾ ॥೧೨॥ ಕಾಳಿಂಗಭೋಜಕರಹಾಟಲಾ
ಟವೂ । ಕರ್ನಾಟಕಕುರುವೂಸಿಂಧುಸೌರಾಷ್ಟ್ರ ॥೧೪॥ ಮಚ್ಛ ಮರಾ
ಳವೂಗುರ್ಜರಕುಕುರವು । ಪಾಂಚಾಳಬಂಗಾಳಗೌಳನೇಪಾಳ॥ಯಿಂ
ತಪ್ಪದೇಶಾದಸ್ವಾಂತಧೊರೆಗಳ.ು । ಪಂಥಾದಿಂಬಂದರೂಅತಿಶಯಾ
ದಿಂದಾ ॥೧೬॥ ಯೆಲ್ಲಾದೊರೆಗಳನಾಗವುಲ್ಲಾಸದಿಂದಲಿ ವಡಗೊಂ
ಡುಬಂದಾನು ನಳರಾಜತಾನೂ ॥೧೭॥ ಅನೇಕುದುರೆಮಂದಿಮಾರ್ಬ
ಲಸಹವಾಗಿ । ವಿನಯಾದಿಂದಲಿಬಂದಾವಿವರಾವಕೇಳಿ ॥೧೮॥

ವ ॥ ಐವತ್ತಾರುದೇಶಾಧೀಶ್ವರರು ನಳರಾಜನ ಬಳಿಗೆ ಬರಲು ಆ
ನಳರಾಜನ ಮುಂದಿಮಾರ್ಬಲನಗಾರ ನೌಬತ್ತು ಮ್ಯಾಳತಾಳದಿಂ
ದ ಬರುವ ವಿಸ್ತಾರವಂ ಪೇಳ್ವೆನದೆಂತೆನೆ.

ಯಾಲಪದ ॥ ರಾಜಾಧಿರಾಜರುಯೆಲ್ಲಾ । ಚೋದ್ಯದಿವಾಲಗವಾ
ಭೇದವಿಲ್ಲಾವಿನ್ನುಬರುತಿರ್ದಾ । ಆನಳರಾಜ । ಆದಿತ್ಯೆಫೋಲ್ವರಥ
ವೇರಿ ॥೧॥ ಭೂದೇವಾಸಚಿವಾಕುತ್ತಬುಧರು । ಪದಾತಿದಂತಿರಥಾಶ್ವ
ವು । ಮುಂದಿಮಾರ್ಬಲವೆಲ್ಲಸಹವಾಗಿ । ಆನಳರಾಜಾ। ಚಂದದಿಂದಾ
ಫೋಗೂತಿರ್ದಾನೂ ॥೨॥ ಕವಿಗ್ಗಾಯಕಸುಜನಾರೆಲ್ಲಾ । ವಿವರಾದ
ಶಾಸ್ತ್ರಜ್ಞರೆಲ್ಲಾ । ಸವಿನಯದರುಷಿಗಳೆಲ್ಲಾರು । ಆನಳರಾಜಾ ।
ವಾರನಾರಿಯುಜನರುಸಹವಾಗೆ ॥೩॥ ಸಂಗೀತವಾದ್ಯಘೋಷಣೆಯು।
ಶೃಂಗಾರಪತಾಕೆರೂಗಂಭೀರವಾದ್ಯರವದಿಂದಾ । ಆನಳರಾಜಾ ।
ಸಂಭ್ರಮದಿಂದಾಲಿಬರುತಿಹನೂ ॥೪॥ ಅವನಿಬಾಯಬಿಡುತಾಲಿರಲು।
ಭುವನವೆಲ್ಲಾನಡಗೂತಿರಲೂ । ಶಿವನಸಖನಾನೆನೆಯುತಾಗಲು ।
ಆನಳರಾಜಾ । ಭೀಮರಾಯನಪಟ್ಟಣಕ್ಕೆಬರುವಾನೂ ॥೫॥

ವ ॥ ಈಪ್ರಕಾರದಿಂದ ಬಂದಂತಾ ನಳರಾಜನ ಮುಂದಿಮಾರ್ಬ
ಲವಂ ಕಂಡು ನಾರದರು ಇದೇನು ಬಂದದು ಎಂದು ಬೆಸಗೊಳ್ಳ
ಲು ಇವರು ಇಲ್ಲಿನ ವಿದ್ಯಮಾನವಂ ನಾರದರಿಗೆ ಪೇಳಲು ನಾರದರು

ಕೇಳಿ ದೇವಲೋಕಕ್ಕೆ ಪೋಗಿ ದೇವೇಂದ್ರನ ಬಳಿಯಲ್ಲಿ ನಿಂತುಕೊಂಡು ಇಂತೆಂದರೂ.

ದ್ವಿಪದೆ ॥ ಕಟ್ಟಿದಜಡೆಸುತ್ತುಕೈಯ್ಯಲಿಸ್ವರವೀಣೆ । ತೊಟ್ಟಿರುದ್ರಾಕ್ಷಿಯುಭಸಿತತ್ರಿಪುಂಡ್ರ । ಕರದಲ್ಲಿದಂಡಕಮಂಡಲಕಾಷಾಯ। ಮೆಟ್ಟಿದಪಾವುಗೆಯುಮೆರವಕೃಷ್ಣಾಂಜನವು । ಯಿಟ್ಟಕಸ್ತೂರಿತಿಲಕಕೊರಳತಾ‌ಪುಡವು । ಕೆಂಜೆಡೆಸುರಿಪಲ್ಲುಕೇರಿಕೇರಿಯೊಳು । ಅಂಬುಜಾಕ್ಷನ ಪಾಡುತಬಂದಮುನಿಪನ ನೋಡಿ । ದಿವಿಜೇಶನಾಗಸಾಷ್ಟಾಂಗದಿಂದೆರಗಿ । ಕೈಮುಗಿದುಸಂಗೀತಸಾಹಿತ್ಯಸಕಲರೀತಿಯಿಂದರಿ। ಶೃಂಗರದಮುನಿಪನಕರದೊಯ್ದುಬೇಗ । ಸಿಹ್ಮಪೀಠದಮೇಲಕುಳ್ಳಿರಿಸಿದೇವೇಂದ್ರ । ಕೈಮುಗಿದುನಿಂತುಯಿಂತೆಂದುಕೇಳಿದನೂ ॥

ವ ॥ ಇಂತಪ್ಪ ದೇವೇಂದ್ರನ ವಾಲಗದ ವಿಸ್ತಾರವಂ ಪೇಳ್ವನದೆಂತೆನೆ. ಅಟತಾಳ-ಅರ್ದ್ಧರೇಕು ॥ ದೇವೇಂದ್ರತಾನಿನ್ನುರೀತಿಯಿಂದಿರಾಲು ॥೧॥ ಅಷ್ಟದಿಕ್ಪಾಲಕರುಸುತ್ತುಮುತ್ತಿರಾಲು ॥೨॥ ಕಿನ್ನರಕಿಂಪುರುಷಕರುಣಾದಿಂದಿರಾಲೂ ॥೩॥ ಗರುಡಗಂಧರ್ವರುಹರುಷದಿಂದಿರಲೂ ॥೪॥ ಸಿದ್ಧವಿದ್ಯಾಧರರುವಾಲ್ಗೈಸುತಿರಲೂ ॥೫॥ ರಂಭೆಯೂರ್ವಶಿಯರೆಲ್ಲಾಸಂಭ್ರಮದೊಳಾಗ ॥೬॥ ನಾಟ್ಯವನಾಡುತಾವಿನಯದಿಂದಿರಲೂ ॥ ೭ ॥ ಇಷ್ಟುಸಂಭ್ರಮದೊಳಗೆದೇವೇಂದ್ರನಿರಲೂ ॥೮॥ ವ ॥ ಇಂತಪ್ಪ ರೀತಿಯಲ್ಲಿರುವ ದೇವೇಂದ್ರನ ಬಳಿಗೆ ನಾರದರುಷಿಗಳು ಬರಲು ದೇವೇಂದ್ರನು ಇಂತೆಂದನೂ.

ಜಂಪೆ ॥ ಯೆಲೆದೇವಮುನಿರಾಯಯೇನುಕಾರಣನೀವೂ । ಬಂದವಿವರವುಯೇನುಪೇಳಬೇಕೆನಲೂ ॥೧॥ ಎಂದುಪೇವೇಂದ್ರನೊಚಂಡದಿಂದಲಿಕರವ । ಮುಗಿದುಕೇಳಿದನಾಗಅಂದುಆಧೊರೆಗೆ ॥೨॥ ದೇವೇಂದ್ರನಿಂತೆಂದುಕೇಳಿದಡೆಮುನಿತಾನು । ವಿವರದಿಂದಲಿಪೇಳ್ದವರೆಮುನಿಯುಳಿಗಾ ॥೩॥

ವ ॥ ಆವೇಳೆಯಲ್ಲಿ ನಾರದಮುನೀಶ್ವರರು ಇಂತೆಂದರೂ.

ಜಂಪೆ ॥ ಧರೆಯೊಳಗೆಯಿಗಾಗೊಂದುವಾರ್ತೆಪುಟ್ಟಿದೆಕೇಳು । ಅರುಹಲಿಲ್ಲವೆನಿನಗೆಸುರರಾಜಯೆಂದಾ ॥೧॥ ವಿಧರ್ಭಪುರವೆಂಬ ॥ ಪಟ್ಟ

ಣಾವನಾಳುವನು। ಭೀಮಸೇನನುತಾನುಅತಿಪರಾಕ್ರಮದಿ ॥೨॥ ಆಭೀ
ಮರಾಯನಿಗೆಅತಿಶಯದವರಪುತ್ರಿ । ಆಮಾನವತಿಯುದಮಯಂ
ತಿಯೆಂಬುವಳೂ ॥ ೩ ॥ ಅವಳಲಾವಣ್ಯವನುಹೇಳುವರೆಅಳವಲ್ಲ । ಶಿವ
ತಾನೆಬಲ್ಲಸೌಂದರ್ಯಸಂಪದವಾ ॥೪॥ ಕೇಳ್ಮೆಯ್ಯನಾನಿನ್ನೆಯಿಳೆಯ
ನೆಲ್ಲವತಿರುಗಿ । ಬಹಳನಾರಿಯರಿನ್ನುಕಂಡುನಾಬಂದೆ ॥೫॥ ನೋಡಿ
ದೆನುಪಾರ್ವತಿಯನೋಡಿದೆನುಲಕ್ಷ್ಮಿಯನು । ನೋಡಿದೆನುಭಾರತಿ
ಯನೋಡಿದೆನುರತಿಯಾ ॥ ೬ ॥ ರಂಭೆಯೂರ್ವಶಿಯುಮೇನಕಿತಿ
ಲೋತ್ತಮೆಯ । ಸಂಭ್ರಮದಿನೋಡಿದೆನು ಸಕಲಸ್ತ್ರೀಯರ್ಯ್ಯರ
ನು ॥೭॥ ಕಿನ್ನರರಸತಿಯನುಕಿಂಪುರುಷರಾಸತಿಯ । ಪನ್ನಗಸುರ
ಸಿದ್ಧಾಸಾಧ್ಯಾರಸತಿಯಾ ॥೮॥ ಇಂತುಲೋಕಂಗಳೊಳಗಿರುವಸತಿ
ಯರನೆಲ್ಲಾ । ಚೆನ್ನಾಗಿಯೆನೋಡಿಬಂದೆನಾನೀಗಾ ॥೯॥ ಕಂಡುಕೇ
ಳಿದುವಲ್ಲಾ ಕಾಂತೆಲಾವಣ್ಯವನು । ಪುಂಡರೀಕಾಂಬಕನೆಬಲ್ಲಕೇಳಿಂ
ದಾ ॥೧೦॥ ಅಂತೆದಮಯಂತಿಯನುನಳರಾಜತಾಮೆಚ್ಚಿ । ತಾಪದಿಂ
ದಿರುತಿರಲುತಾನದಕೆಯಿಾಗಾ ॥೧೧॥ ಆಗನಳರಾಜನನುಕರೆಸಲೋ
ಸ್ಕರವೀಗಾ । ಭೀಮರಾಯನುವಂದುತಂತ್ರವನುಮಾಡೆ ॥ ೧೨ ॥
ಭೂಲೋಕದೊಳಗಿರುವಭೂನಾಯಕರಿಗೆಲ್ಲ । ಲಲನೆದಮಯಂತಿಮ
ದುವೆಯುಯೆಂದುಕರೆಸೆ ॥೧೩॥ ನಳರಾಜನೊಡನೆಭೂನಾಥರೆಲ್ಲರು।
ತೆರಳಿಬಂದೂವಿಧರ್ಭಾಪುರವಶೇರುತಾಲಿರಲು ॥ ೧೪ ॥ ಅದುಕಂಡು
ನಾನೀಗಭಂದುಪೇಳುವೆನೆಂದು । ಸಂದೇಹವಿಲ್ಲದೇಬಂನಿಂಪ್ರೊಡಗೆ ॥

ವ ॥ ಇಂತೆಂದು ದಮಯಂತಿಯ ಕಲ್ಯಾಣದ ವಿಸ್ತಾರವಂಪೇಳಿ ತಮ್ಮ ನಿಜಾಶ್ರಮಕ್ಕೆ ಗಮಿಸಲು ಇತ್ತಲಾ ದೇವೇಂದ್ರನು ವಿದರ್ಭಾಪುರಕ್ಕೆ ಬರುವ ಸಂಭ್ರಮವಂ ಪೇಳ್ವೆನದೆಂತೆನೆ.

ಏಕತಾಳ ॥ ಸುರನಾಥಸುರಲ ಸುದತಿಯುಕೋರಿತಾನೂ । ಕೌತು
ಲಾದಿಂದೆಮವರುಣನುಮನದಿಂಕರಸೀ ॥೧॥ ಕರುಣದಿಂಕುಬೇರನಕ
ರೆಸಿತಾಪೇಳಿದಾಅರಸೀ । ದಮಯಂತಿಯತರಬೇಕೆಂದನುತಾ ॥೨॥
ವಿನಾದರುವಂದುಮಾಯಾತಂತ್ರವಮಾಡಿ । ನಾರಿಯುನಳರಾಜಾ
ಗೊಲಿಯುದಂತಿನ್ನು ॥೩॥ ಅನಿತರೊಳಗೆಭೀಮ್ಜನನಾಯಕಾನು ।

ಆಗನಳರಾಜಗೆದುರಾಗಿಪೋಗಂದೂ ॥ ೪ ॥ ಪುರದಜನರುಯೆಲ್ಲಭರ ದಿಂದನೋಡುವ । ಪರಿಯವರ್ನಿಸುವೆನಾವಿಸ್ತಾರ ॥೫॥ ಮಾಳಿಗೆ ಮನೆಯೊಳುಮೇಲುಮಾಳಿಗೆಯೊಳು। ಮುದದಿಂದನೋಡುವರುಮೇ ಲೂಮುಚ್ಚಿನೊಳೂ ॥೬॥ ತಮತಮ್ಮಮನೇಗಾಳತಮ್ಮಬಾಗಿಲಮುಂ ದೆ। ಗುಂಪುಗುಂಪಾಗಿಗೂಡಿನೋಡುತಾಲಿರಲೂ ॥೭॥ ನೋಡಿರೆಯಿ ರಾಜಚಂದ್ರಾನಲಾವಣ್ಯ। ಗಾಡಿಯನೆಂದುಕೊಂಡಾಡಿದರಾಗಾ ॥೮॥

ವ ॥ ಇಂತೆಂದು ಪುರಜನರು ನಳರಾಜನು ಬರುವ ವಿಶ್ವಾಸವಂ ನೋಡಿ ಏನೆಂದುಕೊಂಡಾಡುತ್ತಿದ್ದಾರೂ.

ಯೇಲಪದ ॥ ಯೆವ್ವಾನಾವೂಜವ್ವಾನಾವೂ । ಅಂದಾಚಂದಾ ವನ್ನುನೋಡಿಚಂದ್ರನಂತೆಪೊಳೆಯುತಿರಲಾಗಿ । ಆಪುರದಾಜನ ರೂ । ಯೆಲ್ಲಾರೂನೋಡುತಾಲಿದ್ದಾರೂ ॥೧॥ ಮನ್ಮಥನೋಶ್ರೀ ಕೃಷ್ಣನೊಮುನ್ನೂಯಿತಾತ:ವಸಂತನೋ ಯೆನ್ನುವಂತೆನೋಡು ತಿದ್ದಾರೂ । ಆನಳರಾಜನ । ಕನ್ನೆಯರಸಿರೋಮಣಿಯೂ ಪುಷ್ಪಾ ಬಾಣಾಯಿರಲೂತಾನೂ । ಪುರುಷಾಮನ್ಮಥನೆನ್ನಬಹುದು । ಪುಷ್ಪ ಬಾಣಾವಿಲ್ಲಾದಿರಲಾಗಿ । ಅಪುರದಾಜನರು । ಒಪ್ಪದಿಂದಾಮಾತಾ ನಾಡುವರು ॥೨॥ ಶಂಕಾಚಕ್ರಾವಿರಲೂತಾನೂ । ಶ್ರೀಕೃಷ್ಣನೆನ್ನಾ ಬಹುದು । ಶಂಕುಚಕ್ರಾವಿಲ್ಲಾವೆನುತಾಲಿ । ಅಪುರದಾಜನರು । ಬಿಂ ಕೆದಿಂದಾಮಾತಾನಾಡುವರೂ । ಮೂರುಕೆಣ್ಣುಮುಖದೋಳಿರಲು । ಪುರಾರೀಶಿವನೂಯೆನ್ನಬಹುದು । ಮೂರುಕಣ್ಣುಯಿಲ್ಲಾವೆನುತಾಲಿ। ಅಪುರದಾಜನರು। ಸೇರಿತಾವುಮಾತಾನಾಡುವರು ॥೪॥ ಸಾವಿರಕಣ್ಣು ಯಿದ್ದಾರೆಕೋಪಿದಾನುರಪಾನನ್ನಾಬಹುದು । ಸಾವಿರಾಕಣ್ಣಿಲ್ಲಾ ವೆನುತಾಲಿ । ಅಪುರದಾಜನರೂ । ನಾವಿನಿಂದಾಮಾತಾನಾಡುವರು ॥ ವಿಧವಿಧದಮಾತಾನಾಡಿ । ಮುದದೀಪುರದಾಜನರುಯೆಲ್ಲಸದನದೊ ಳಗೆನೋಡೂತಿದ್ದಾರೂ । ಆನಳರಾಜಾ । ಮುದದಿತಾನೂಬಿಡದೀ ಶೇರಿದಾ ॥೭॥ ವ ॥ ಇಂತೆಂದು ನಳರಾಜನು ಬಿಡದಿಯ ಸೇರಿದ ನಿತರೊಳು ಇತ್ತಲಾ ದೇವೇಂದ್ರ ದೇವತೆಗಳು ರಥದಮೇಲೆ ಬಂದು ಒಬ್ಬರು ಅರಿಯದಂತೆ ನಳರಾಜನ ಎದುರಾಗಿ ಬಂದು ನಿಲ್ಲಲೂ ತೀ

ವ್ರದಿಂದೆದ್ದು ಅಲ್ಲಿಭಯಭಕ್ತಿಯಿಂದ ಸಾಷ್ಟಾಂಗದಂಡಪ್ರಣಾಮ ವಂಮಾಡಿಕೈಮುಗಿದುನಿಂತು ನಳರಾಜನೇನೆನ್ನುತ್ತಿರ್ದಾನೂ.

ತ್ರಿಪುಡೆ ॥ಅಮರಪತಿಯಮರೇಶವರುಣರು ನೀವು ನಾಲ್ಕಾ ದಶೆಯಧೊರೆಗಳು। ಕ್ರಮದಿ ಬಿಜಯಂಗೈದಿರಿಮ್ಮಯ ಪುಣ್ಯದಿಂ ದಾ ॥೧॥ನಿಮ್ಮದರುಶನವಾಗಿಯೆನ್ನ ಯಜನ್ಮ ಸಫಲಾವಾಯಿತಾ । ನೀವುಬಿಜಯಂಗೈದವಿವರವುಪೇಳಬೇಕು। ಪೇಳಿದರೆಅಕಾರ್ಯವೆಲ್ಲವು ಛಳಿಲನೇಅನುಕೂಲಮಾಡುವೆ। ಪೇಳಿಯನುತಲಿಕೇಳ್ದನಾಭಾಕಾಲ ನಾಗಾ॥ ಯನಲುಸುರಪನುಯಿಂದನಾಕ್ಷಣವಿನಯದಿಂದಾನಿನ್ನಯ ಘನವಸತ್ಯವನೋಳ್ಪವೆನುತಲಿ ಬಂದೆವೆಂದಾ ॥೪॥ ನೋಡಿಬಹುಸಂ ತೋಷವಾಯಿತುರಾಢಿಯೊಳಗೆನಿನ್ನನು। ದೃಢವರಿತುಮಾಡುವರು ಮದುವೆಂರುಗಾಢದಿಂದಾ ॥೫॥ ಯೆಂದುವಾರ್ತೆಯಕೇಳಿನಾವೂ.ನೀ ನೇಅಪ್ತಾಯೆನುತಲಿ ।ವಿನಯದಿಂನಿನ್ನಬಳಿಗೆ ಬಂದೆವು ಚಂದದಿಂ ದಾ ॥೬॥ವಸುಧೆಪಾಲಕರೆಲ್ಲಪಟ್ಟಣಕ್ಕೆ ಬಂದುಯಿರುವಾರಿಲ್ಲಿಗೆ। ಕುಶ ಲಕೋವಿದನಿನಗೆಸರಿಯೇಕುವಲಯೇಶಾ ॥

ವ ॥ ಇಂತೆಂದು ದೇವೇಂದ್ರನಮಾತಿಗೆ ನಳರಾಜನು ನಸುನಗೆ ಯಿಂದ ಏನೆನ್ನುತ್ತಿರ್ದಾನೂ.

ಸಾಂಗತ್ಯ॥ಇದುಯೇನುದಿವಿಜಾರೆನೀವಿಂತೆಮಾತಾನು।ಆಡಬಹು ದೇಯೆನ್ನಕೂಡೆ ॥೧॥ ವಸುಧೀಶರೆಲ್ಲಾರು ಬಂದಾಯಿರುವದೇನು । ಯಿಾವಿಷಯವನಗೆಹೇಳಬಹುದೆ॥೨॥ಹಿಂದುಮುಂದೆಯನಾನುಅ ಕೆಯೋಳ್ಮಾತಾಡಿ।ಬಂದನಲ್ಲಕೇಳ್ಮೆಯ್ಯಾ ॥೩॥ ಹ್ಯಾಗಾದರಾಯಿಾ ಗಹೋಗಿಬರುವೇನಾನು।ಆಗದಿರ್ದರೆಹ್ಯಾಗೆಯಂದ॥೪॥ಯಿಂಥಕೆಲ ಸಕೆನಾನುಹೋಗಲಾರೆನುಸ್ವಾಮಿ।ಯಿನ್ಯಾವಕೆಲಸಪೇಳೆನಗೆ ॥೫॥

ವ॥ ಇಂತೆಂದು ನಳರಾಜನಕೂಡೆ ಅತಿಕೃಪೆಯಿಂದ ದೇವೇಂದ್ರ ನು ಯೇನೆನ್ನುತ್ತಿರ್ದಾನು.

ಜಂಪೆ ॥ಇನಕುಲಾಧೀಶನೀಯಾವ ಕಾರ್ಯವಾದರು ॥ಅನುಕೂಲ ಮಾಡುವೆನುಯಂದುಪೇಳ್ದಿಎಮಗೆ।೧॥ಅದರಿಂದನಾವೀಗಹೋಗಿಬಾ ರೆಂದೆನಲಾ.।ಪೋಗಲಾರೆಎಇನ್ನು ಹುಸಿಮಾತುನುಡಿಯೆ ॥೨॥ಯಿಾಗ

ಲಾದರುನಾವುಪೋಗಿಬರುವೆವುಯಿನ್ನು ।ನಿನ್ನ ಸತ್ಯಾವತಿಳಿಯಬೇಕೆಂದುಪೇಳುವುದು ॥೩॥ಸತ್ಯವಂತನುಯೆಂದುಸುರಋಷಿಪೇಳಲುನಾವು। ಅತ್ಯಂತಸಂತೋಷದಿಂದಾಲಿಬಂದೆವು ॥೪॥ನಿನ್ನಸತ್ಯವುಯಲ್ಲತಿಳಿಯಬಂದಿತು ಯೆಮಗೆ ॥ ನಾವು ಪೋಗುವೆವಿನ್ನು ನರನಾಥಕೇಳು ॥೫॥ಶ್ರಿಷ್ಟೀಶನೀನಿನ್ನುಶ್ರೇಷ್ಠನೆಂದೆನಿಸಿರ್ದೆ । ಹುಟ್ಟಿದಾ ಮನೆಯೂಪೆಹುಸಿವೆಮಾತಿನೊಳಗೆ ॥೬॥ ಕೇಳೈಯ್ಯಾ ನಳರಾಜನಮ್ಮಕಾರ್ಯವುಯಲ್ಲಾ ।ಅನುಕೂಲವಮಾಡಿದರೆಅದುಮೇಲೆಯಲ್ವೆ ॥೭॥ ನಳರಾಜಸುರರಿಗೆಮದುವೆಮಾಡಿದನೆಂದು ।ಲೋಕವೆಲ್ಲವುನುಡಿಯೆಅದು ಮೇಲ್ಕಯಲ್ವೆ ॥೮॥ಧರಣೀಶನಮ್ಮಮೇಲೆದಯವಿಲ್ಲನಿನಗಿನ್ನು ।ಆದರೇನಾಯ್ತುದಮಯಂತಿಬಳಿಗೆ ॥೯॥ಹೋಗಿನೀನಳರಾಜಸೊಗಸಿಂದ ಮಾತಾಡಿ।ಯೀಗಲೆಬರಬೇಕುಭೋಗೀಶಯನಲಾ ॥೧೦॥ ಹೇಳಿತಕ್ಕಮಾತುಗಳುಹೇಳಿಯೀಗಲೆ ನೀನು ।ಬಾಲೆಯನು ಅನುಕೂಲ ಮಾಡಿಬರಬೇಕಾ॥ ವ ॥ಇಂತೆಂದು ದೇವೇಂದ್ರನು ಪೇಳಲು ನಳರಾಜನು ಕರಗಳಂಮುಗಿದು ಅತಿಭಕ್ತಿಯಿಂದ ಯೇನೆನ್ನುತ್ತಿರ್ದಾನು.

ತ್ರಿಪುಡೆ॥ನಾನುನಿಮ್ಮಯಭಂಟನಾಗಿರೆಯೀಗನೀವುನನ್ನೊಳು। ಜ್ಞಾನದೊಳುದಯವಿಟ್ಟುಬಂದಿರಿಸ್ವಾಮಿಯೆಂದಾ ॥೧॥ ನಾರಿದಮಯಂತಿಇರುವಬಳಿಗೆ ಹ್ಯಾಗೆಹೋಗಲಿ ನಮ್ಮರಾಯನು ।ಮಾನವರು ಕಂಡರೆಯನ್ನನುಹೀನನೆಂದಾರು ॥೨॥ ಅದಕೆಹೆದರಿಮಾತನಾಡಿದೆ ನೀವುಕೇಳಿಯನ್ನ।ಮಂದಮತಿಯೊಳುದ್ವಂದ್ವಮಾತದುಆಡಲಿಲ್ಲಾ। ಯೆಂದಮಾತನುಸುರಪ ಮೆಚ್ಚಿ ಯೊಬಂದು ಮಾತನು ನುಡಿದನು ಇಂದು ನಿನ್ನನು ನರರುಕಾಣದವರವನಿತ್ತಾ ॥೪॥ಕಳುಹುವೆನುನೀ ಹೋಗುಯೆನ್ನುತ ಯಿಳೆಯನೃಪತಿಗೆ ಸುರಪಪೇಳಲು ।ಕಳವಳವಬಿಟ್ಟನ್ನು ಹೋದನು ಕರುಣದಿಂದಾ ॥೫॥ವಿನಯದಿಂದಲಿ ನಳನುಪೋಗುವನಿನಿಗೆಯೀಗಾನರರುಕಾಣದ । ಘನದವರವನುಕೊಟ್ಟನೆನುತ ಹೊರಟನಾಗಾ ॥೭॥ ದಾದಿಯರುದಮಯಂತಿದೇವಿಯುಪ್ಪರುಳದಿಂದಲಿನಿನ್ನ ಕಾಣ್ವರು । ದಿವಿಜಪಟ್ಟಣದಜನರುಕಾಣರುಯೆಂದುಮರುಗೆ ॥೮॥ಯೆಂದುವರವನುಕೊಟ್ಟುಹರುಷದಿಚಂದದಿಂದಾಕಳುಹಲು

ಸಂದೇಹವಿಲ್ಲದೆಪೋದನಾನೃಪಅಂದದಿಂದಾ ॥೮॥ ಹೋಗುವಂತ
ಸಮಯದೊಳುನೃಪ । ಆಗಬಂದೊಸುರರಿಗೆ । ರಾಗದಿಂವಂದಿಸಲು
ಹರಕೆಯಕೊಟ್ಟುಕಳುಹೆ ॥೯॥

ವ ॥ ಇಂತು ನಳರಾಜನು ದಿವಿಜೇಶ್ವರರ ಕೈಯ್ಯಲ್ಲಿ ಆ ಪಟ್ಟಣ
ದ ಜನರು ಕಾಣದಂತೆ ವರವಂತೆಗಡುಕೊಂಡು ಹೋಗುತಿರ್ದ್ದಾನ
ದೆಂತೆನೆ.

ಸಾಂಗತ್ಯ ॥ ಭೀಮರಾಯನುತಾನು ಮಂದಿವಾರ್ಬಲಸಹಿತ ।
ಸಿಹ್ಮಪೀಠದೊಳುಕುಳಿತಿರ್ದಾ ॥೧॥ ಅಲ್ಲಿತಾನೊಂದುಕ್ಷಣವುಯಿರ್ದ॥
ನಳರಾಜನಿಲ್ಲಾದೆಮುಂದಕ್ಕೆನಡದಾ ॥೨॥ ಅತ್ಯಂತವಿಸ್ಮಯಹ
ರ್ಮ್ಯಗಳನೋಡಾಟ। ಮತ್ತೆಮುತ್ತಿನಮನೆಕಳದೂ ॥೩॥ ಅಂದವಾ
ದವಜ್ರಮಂಟಪವನ್ನುಕಳದು । ಘನವಾದಚಿತ್ರಚಾವಡಿಯಾ ॥೪॥
ಹರುಷದಿಂಪವಳಾದಬಾಗಿಲುಗಳಕಳದು । ಸರಸದಿಂದಲ್ಲಲ್ಲಿನಿಂತೂ॥
ಬಂದಾನುದಮಯಂತಿಅರಮನೆಗಾಗಾಲೆ । ಚಂದಾದಿಂದಲಿರಾಯ
ನಾಗಾ ॥೬॥ ನವರತ್ನದರಮನೆಯೊಳುದಮಯಂತಿಯು । ಯುವ
ತಿಯಾಕೊಡಿರಲುಕಂಡಾ ॥೭॥ ಬಂದುತಾನಾಗಲೂಯೆದುರಾಗಿನಿ
ಲ್ಲಾಲೂ । ಕಂಡೂಯಿಂತೆಂದಳುತಾಂ ॥೮॥ ಭಾವಾಜನೆಂದುಬೆದರಿ
ದಮಯಂತಿಯು । ಬಾಲೇರನೋಡಿಪೇಳಿದಳೂ ॥೯॥ ಯುವತಿನೀ
ಕೇಳುಯಿಗಾತಾನೆನಳರಾಜ। ಪೋಲಿಕೆಯಿದೆನೋಡುನೀನು ॥೧೦॥ ಮ
ನೆಯೊಳುತಿಳಿದುಹೇಮಸ್ತಂಭಮರೆಯಾಗಿ । ತನ್ನಸಖಿಯರಕೊಡೆ
ಪೇಳ್ದಾಳು॥೧೧॥ಜನನಾಥಯಾವಧೊರೆಯೊನೀವುಕೇಳೆಂದು। ಘನಹ
ರುಷದಿಂದಾಪೇಳಿದಳೂ ॥೧೨॥ ಯೆಂದಮಾತಿಗೆದಾದಿಯಾರಾಗಹ
ರುಷಾದಿ । ಬಂದೊಕೇಳಿದರಾಧೊರೆಯಾ ॥೧೩॥

ವ ॥ ಇಂತೆಂದು ದಾದಿಯರಿಗೆ ದಮಯಂತಿ ಪೇಳಲು ಆ ಮಾ
ತುಗಳಂಕೇಳಿ ದಾದಿಯರು ಬಂದು ನಳರಾಜನಂನೋಡಿ ಏನೆನ್ನು
ತಿರ್ದ್ದಾರೆ.

ಯಾಳಪದ ॥ ಎಲ್ಲಿಂದಾಬಂದೀರಿನೀವು ಚಲ್ವಾನಾದನೃಪತಿನೀ
ವೂಯೆಲ್ಲಿನೀವುಯಿರುವ ಪಟ್ಟಣವುಯೆಂದು । ವನಿತೇರುಸಲ್ಲಲಿತಾ

ದಿಂದಾಕೇಳ್ದಾರು ॥೧॥ ಯಾವದೇಶದ ಧೊರೆಯಾಸುತರು ತಾವ್ಯಾ
ವುದುಯನುತಾ । ತಾವುಫುಲ್ಲಲೋಚನೆಯಾರು । ಕೇಳ್ದಾರುಅನೃ
ಪತಿಯನ್ನು । ಯೆಲ್ಲವಿವರವುಪೇಳಿಯೆಂದಾರು ॥ ೨ ॥ ಇಲ್ಲಿಬಂದಾ
ಕಾರಣವೇನುಚಲ್ವನಾದನೃಪತಿನೀವೂ । ಯೆಲ್ಲವನ್ನೂಪೇಳಿಯಂ
ದಾರೂ । ಆನಚೀಯಾರುನಿಲ್ಲಲಾರದೆಕೇಳಿದರಿಂತೆಂದೂ ॥೩॥ ಕೇಳಿ
ದಮಾತಿಗೆರಾಯುಬಹಳಸಂತೋಷವನೊತಾಳಿ । ಪೇಳಿದನಳರಾಜ
ನಿಂತೆಂದೂ ॥೪॥ ನಿಷದಾಪುರವನಾಳುವಂಥಾವಸುಧೀಶನನ್ನುಯುಪೆ
ಸರು । ದೆಶೆಯುನಾಳ್ವನಳರಾಜನುದೇವೇಂದ್ರಾನೀಗಾಹಸನಾಗೀಕ
ಳುಹಲುನಾಬಂದೆ ॥ ೫ ॥ ದೇವೇಂದ್ರಾನೊಯುಮರಾಜಾನುವರುಣಾ
ನುಕುಬೇರರನ್ನೂ । ಅವರುನಾವೂವಾರಿಗೆದಿವಿಜಾರೂಓನಳೀನಾಕ್ಷಿ
ಕೆಳುಹೀದಾರೂನಿನ್ನಾಕೇಳುವರೆ ॥೬॥ ನಮ್ಮೊಳಾಗೆಬ್ಬಾರೀಗೇಅನು
ಕೂಲಮಾಡಿಬಾರೆಂದು । ಕೆಳುಹಿದಾರೆನಾನುಬಂಡೆನುಓನಳೀನಾಕ್ಷಿಯಿ
ಳಿಯೊಳೀನುಪುಣ್ಯಾವಂತೆಯೆ ॥೭॥ ಅಂತಾದೇವತೆಗಳನೂನೀನೂ
ಸ್ವಾಂತಾದಿಂಮದಿವಾದರೆ । ಕಾಂತೆನಿನ್ನುಯುಪುಣ್ಯಕೆಸರಿಯಿಲ್ಲಓನ
ಳಿನಾಕ್ಷಿಪಂಥವಾಡಬ್ಯಾಡನಿನಗಿನ್ನೂ ॥೮॥ ಅವರಪಿಸ್ತಾರವನೆಲ್ಲವಿ
ವರಾದಿಂದಪೇಳ್ವೆಕೇಳು । ದಿವಿಜಪತಿಯುದೇವೇಂದ್ರನೀಗಾಲುಓನ
ಳೀನಾಕ್ಷಿಪೂರ್ವದೆಶೆಯುನಾಳುವಂಥವನೂ ॥೯॥ ಮತ್ತೊಬ್ಬಯುಮ
ಧರ್ಮರಾಯುಕರ್ತನಾಗಿಧರ್ಮಕರ್ಮವೊತ್ತಮಾಗೀತಾನೂ । ಪಿಪರಿ
ಸುವಾಓನಳಿನಾಕ್ಷಿದಕ್ಷಿಣದೇಶವನಾಳುವನು ॥ ೧೦ ॥ ವರುಣಾರಾಜಾ
ನೆಂಬೊನೊಬ್ಬಕರುಣಾದಿಂದಪಶ್ಚಿಮದೆಶೆಯು । ಮರಣವಿಲ್ಲದೇಆಳೊ
ವಂತವನೂಓನಳಿನಾಕ್ಷೀಕರುಣದಿಂದಪೇಳುವೆನು ॥೧೧॥ ಧನಪತಿ
ಎಂಬುವನೊಬ್ಬಾಘನದಿಂದ । ವುತ್ತರದೇಶಾ ಅನುಪಿನಿಂದಆಳುತಿ
ರ್ದಾನು । ಓನಳಿನಾಕ್ಷಿಯಿನ್ನುಯಿವರುನಾಲ್ಕುಮಂದೀಯೂ ॥೧೨॥
ಶಂಕೆಯಿಲ್ಲಾದೆಆಳುವಂಥಾಬಿಂಕವಾದ ಧೊರೆಗಾಳಿವರೂ । ಪಂಕೆ
ಜಾಕ್ಷಿಕೇಳೂಯುನುತಾ ಆನಳರಾಜಾ। ಪೊಂಕದಿಂದಾಪೇಳಾಪಣಾಕ್ಷೀ
ಗೆ। ಅವರೂಯಿನ್ನುಪುಣ್ಯಾತ್ಮರುಅವರಾಉತ್ತಮಪುರುಷರಿನ್ನು ।
ಆವರುಅನುಮಿಷಪುರದಾಧೊರಗಾಳರಾ॥

ವ॥ಇಂತೆಂದು ನಳರಾಜನು ದಮಯಂತಿಗೆ ಪೇಳಿಮತ್ತಿಂತೆಂದನಾ ಜಂಪೆ॥ ಅಂತದಿವಿಜರುನಿನ್ನ ಸ್ವಂತವಾಗೊಲಿದುಬರೆ । ಕಾಂತೆ ನಿನ್ನಯಪುಣ್ಯಕಿನ್ನು ಸರಿಯುಂಟೆ ॥೧॥ ಅವರೊಳುನಿನ್ನಮನಸಿಗೆ ಬರುವವರನ್ನು । ಯುವತಿಪೇಳೆಂನೊಡನೆವಶವಮಾಡುವೆನಾ ॥೨॥ ಧರಯೊಳಗೆದಿವಿಜರನುಕರಪಿಡಿಯೆಪಿನ್ನ । ಸುರರುನರರೆಲ್ಲರುಸ್ತುತಿಯುಮಾಡುವರಾ ॥೩॥ ದಮಯಂತಿಕೇಳುನೀಧರೆಯೊಳಗೆಯಿಂದ್ರನಮನೆಯರಾವರೆನಿನ್ನ ಮುದದಿಸ್ತುತಿಸುವರು ॥೪॥ಅದುನಿನಗೆಘನವೆಂದುಚದುರೆನಿಂನಹೃದಯದೊಳು । ಯಿರುವವಿವರವುಪೇಳುಅನುಮಾನಬ್ಯಾಡ ॥೫॥ಅದುಕೇಳಿದಮಯಂತಿಹೃದಯಕೋಪವತಾಳಿ । ಮದನರೂಪನನೋಡಿ ಮತ್ತೆಪೇಳಿದಳಾ ॥

ವ॥ ಇಂತೆಂದು ನಳರಾಜನಕೂಡೆ ದಮಯಂತಿ ಮಹಾಕೋಪದಿಂದ ಯೇನನ್ನುತಿರ್ದಾಳಾ

ಏಕತಾಳ ॥ ಅಹುಸ್ತ್ರೀಯ್ಯನೀನಿಂತಕೆಲಸವಮಾಡಿದೆ।ಕವರಿಲ್ಲಹೃದಯದೊಳ್ನಿನ್ನನಂಬಿರಲು ॥೧॥ ಸ್ತ್ರೀಯರಾರುಪುರುಷನಮೆಚ್ಚಿಬಾರಮಯೆಂದುಹಿರಿಯರಾಡಿದಮಾತುಸರಿಬಂತುಯಿಗಾಗ॥೨॥ ಕಮಲಜಕೇಳಿನ್ನನಮರಸ್ತ್ರೀಯರಮುಂದೆ । ನಗೆಕೇಡುಮಾಡಿದನರನಾಥನೀನು ॥೩॥ ಆಪಕ್ಷಿರಾಜನುಹರುಷದಿಂದಲಿಬಂದು । ವಪ್ಪದಿಂಪೇಳಿದವಚನವಕೇಳಿ ॥೪॥ ನಿನ್ನ ಮ್ಯಾಲಣಚಿಂತೆನಿನ್ನಮೇಲಣಜ್ಞಾನ। ನಿನ್ನ ಮ್ಯಾಲಣಮನಸುನಿನ್ನಧ್ಯಾನದೊಳೂ ॥೫॥ ಮರಿಯಾದೆಯಿರುವಂಥಮ್ಯಾಲಣಮನಸುನಿನ್ನದಾನದೊಳೂ ॥೬॥ ಮರಿಯಾದೆಯಿರುವಂಥಮಾನಿನೀಯನುನೀನು । ಮದನಬಾಣಕೆಯನ್ನ ಮತ್ತೆ ಗುರಿಮಾಡಿ ॥೭॥ ಬಂದುಕೇಳಿದಮ್ಯಾಲೆದಂಡಿಸಲ್ಯಾಕಿನ್ನು । ಮಂಡಲಪತಿಅಜನುಬರದಬರಹವೂ ॥೮॥ ತಪ್ಪಾದುಕೇಳಿನ್ನುವಪ್ಪದಿಂದಲಿಪೇಳಿ । ಕರ್ಪೂರಗಂಧಿಯಿಂತೆಂದಳಾಗ॥ಅಮರೇಂದ್ರಪತಿಯೆಲ್ಲಿಅಕಟಕಟನಾವೆಲ್ಲಿ । ಅವರುನನ್ನಾನೇಕೇಳೆಅದುದೋಷವೆನಾಗೆ ॥೧೦॥ ಅವರಿಗೆನಾನಿನ್ನ ಮಗಳಾಗಬೇಕೆಂದು। ಮಾಪಿವರ್ತನೆದಪ್ಪಿ ಕೇಳುವರೆಯಿನ್ನಾ ॥೧೧॥ ಭುವನಾದಿಪತಿನಿನ್ನ ಮೊದಲುಮೆಚ್ಚಿದ

ವೇಲೆ । ಭುವನದೊಳಿಂನೊಬ್ಬ ಪುರುಷರಿಂನುಂಟೆ॥ ೧೩ ॥ ಅವರುನೀ ವೆಲ್ಲಾರುಹರುಷದಿಂವೆಚ್ಚ್ಯವಂತೆಪರಿಯುವಾಡುವೆ ಕೇಳುಧೊರೆಸು ತಸಾದಿ ॥೧೩॥ ಯೆಂದವಾತಿಗೆರಾಜಚಂದದಿಂನಗುತಾಳಿ । ಮಂದ ಗಮನೆ ಭೂಮರನುಯಿಂತೆಂದಾ ॥೧೪॥

ವ ॥ ಇಂತೆಂದು ನಳರಾಜನು ನಸುನಗೆಯಿಂನಕ್ಕು ಮತ್ತಿಂತೆಂ ದನೂ. ಜಂಪೆ ॥ಸುರನಾಯಕರು ನಿನ್ನನೆಚ್ಚಿ ತಾಬಂದಿರಲು ॥ವಿ ವರ ವರಿಯುದೆಂರುನ್ನ ವೆಚ್ಚ್ಯ ವರನೀನಾ ॥೧॥ಧರೆಯೊಳಗೆ ಮಾಡಿದ ದಾನದರ್ಮ್ಮಗಳಿಂದಾ। ಸುರಲೋಕಸೇರುವರು ಸುದತಿನೀಕೇಳೂ ॥೨॥ ಚಂದ್ರವಧನೆಯೆ ನಿನ್ನ ಪುಣ್ಯದ ದೆಸೆಯಿಂದ ಯಿಂದ್ರದೇವರು ನಿ ನ್ನ ಕೇಳುವಾರೆಂದ ॥೩ ॥ ಆವರನೀಬ್ಯಾಡೆಂದು ನನ್ನ ನೀಮದಿವಾಗೆ । ಭುವನಾದ ಜನರು ನಗುವರು ಕೇಳುತರುಣಿ ॥೪॥ ಅದು ಅಲ್ಲದೇ ನಿನ್ನ ಅವರುಕೇಳಿದಮ್ಯಾಲೆ । ಮುದದಿಂದ ನಿನ್ನ ನಾಮದುವೆಯಾಗುವ ರೆ ॥೫॥ ಯಿಮಶನಾನೇ ಕೇಳ್ಗನ ಧೊರೆಗಳವರಾಗ್ನಿ ಆವರೀಗೆ ಭಂ ಟನಾಗಿಯುನಾನುಬಂದೂ ॥೬॥ ನಿನ್ನೆಮದುವಾಗುವದುನ್ಯಾಯುವ ಲ್ಲವು ಯುನಗೆ॰ಆಯುತಾಕ್ಷಿಯೆ ಕೇಳು ಅತಿಹರುಷದಿಂದಾ ॥೭॥ ಯೆಂ ದವಾತನು ಕೇಳಿ .ಸಂದೇಹಗೊಂಡಾಗ॰ಬಂದು ದಮಯಂತಿ ಹಾ ಯೆಂದೆನುತಲಿರಲೂ॥ ವ॥ ಇಂತೆಂದು ದಮಯಂತಿಯು ಆಳುತ್ತಾ ವತ್ತಿಂತೆಂದಳೂ.

ಕುರುಚುಜಂಪೆ॥ ಅಮರೇಂದ್ರತಾನಾಗೇನ್ನೊ । ಮತ್ತೆಯಮ ಧರ್ಮ್ಮತಾನಾಗಲಿನ್ನು ॥೧॥ ಜಲದೇವತಾನಾಗೇನ್ನು ಅವನು ಜಲಜಾ ಪ್ತತಾನಾಗಲಿನ್ನು ॥೨॥ಜಲಪತಿಯು ತಾನಾಗಲಿನ್ನು ಮತ್ತೆಘನವಾ ದಮದನನಾಗಲ್ಕಿ ॥೩॥ ಆರಾದರೂವಲ್ಲೆನಾನು। ಮತ್ತೆಧೀರ ಕೇಳ್ಕೆ ಯಿನ್ನುನೀನು ॥೪॥ ಅವರಿಗೆನೀ ಹೆದರಿಕೊಂಡು । ಮತ್ತೆಆಗದಿದ್ದರೆ ನೀನುನೋಡೂ ॥೫॥ ನೀನವರುವೆಚ್ಚ್ಯವಂದದಲೀ। ನಾನುಹರಣವ ನುತೊರನೆಚಂದದರಿ ॥೬॥ ಯಿಂತೆಂದುನುಡಿಯೆದಮಯಂತಿಕೇಳಿ ಸಂತಸದಿಬಂದಜನಪತಿಯು॥೭॥ ಸುರಪತಿಯುಕೇಳಿಯಿಮಾತು॥ ಬಹಳಹರುಷವನುತಾಳಿಮನಸೋತಾ ॥೮॥ ಜನಪತಿಯು ಮಾತತಾ

ಮೆಚ್ಚಿ । ಮತ್ತೆಘನಹರುಷದಿಂದಕೊಂಡಾಡಿ ॥೯॥ ಅನಿತರೊಳುನಳ ಚಕ್ರವರ್ತಿ। ಆಕೆಮನದ ವಿಷಯವನೆಲ್ಲತಿಳಿದು ॥೧೦॥ ಮತ್ತೆತಾವಿನ್ನು ತೆರಳಿಬಂದೂ । ಅವರಘನಪದಕೆನಮಿಸಿದನುನಿಂದೂ॥

ವ॥ ಇಂತೆಂದು ನಳರಾಜನು ದಮಯಂತಿಯ ಮರ್ಮವೆಲ್ಲಮಂ ತಿಳಿದು ದೇವತೆಗಳ ಬಳಿಗೆ ಬಂದು ಸಾಷ್ಟಾಂಗವೆರಗಿ ವಿನೈಸುತ್ತಿರ್ದ್ದಾನು. ಅಟತಾಳ-ಅರ್ಧಸೇಕು॥ ನೀವು ಅಪ್ಪಣೆಕೊಟ್ಟು ಕಳುಹಲಾಯನ್ನಾ। ಆಭಾಮೆಯಡಗೆಪೋಗಿರಲ್ಲವಂತಿಳಿದೂ ॥೧॥ಪರಮಹಾವನ ಭವಾದುರಿತಾನೆ ಕೇಳೂ। ನಿಮ್ಮನೊಲ್ಲೆಂದು ಕನ್ನೆತಾನುಡಿದೂ॥೨॥ಯನಲುದೇವತೆಗಳು ಘನದಿಂಪಕೇಳಿ। ಬಾರೈಯ್ಯಾನಳರಾಜಾ ಬಾರೈಯ್ಯಾ ನೀನು ॥೩॥ ಬಾರೈಯ್ಯನಿನ್ನಂತಹಾಧೀರನ ಕಾಣೆನಿನ್ನಂತಸತ್ಯವಂತರಯಿನ್ನೆಲ್ಲಜಗದೀ॥೪॥ ನಿನ್ನ ಮೆಚ್ಚಿದೆ ಯಿನ್ನು ಅನುಮಾನಬ್ಯಾಡ। ವಸುಧೀಶನೀನಿನ್ನ ಕಳಿಮುಖೀರಯನ್ನು ॥೫॥ ನೀನೆಮದುವೆರಾಗಿಚನ್ನಾಗಿ ಬಾಳೂ। ಯೆಂದುಹರಕೆಯನಿತ್ತು ಚಂದದಿಂಸುರರೂ ॥೬॥ ಬಂದುಮತ್ತೊಂದು ತಾವುನರರರಿಯದಂತೆ ವಂದಾಗಿಕುಳಿತಾರುಅಮರವಲ್ಲಭರೂ॥ ವ॥ ಇಂತೆಂದು ದೇವತೆಗಳು ಆ ಸ್ಥಳವಂಬಿಟ್ಟು ಮತ್ತೊಂದು ಬಳಿಯಲ್ಲಿ ನರರು ಕಾಣದಂತೆ ಕುಳಿತು ಯಿರುವ ಸಮಯದಲ್ಲಿ ಭೀಮರಾಯನು ಯೇನೆನ್ನುತ್ತಿರ್ದಾನ.೩.

ಸೀಸಪದ್ಯ॥ ಭೀಮರಾಯನು ತನ್ನ ಮಂತ್ರಿಮಾರ್ಬಲಕರಿಸಿ ಆ ಮಹಾಶಾಸ್ತ್ರೀಕರನ್ನು ಕರಸಿ । ಶುಭಲಗ್ನಗಳತಾವುಪ್ರಬಲದಿಂಕಟ್ಟಿಸುತಅವನಿಧೊರೆಗಳನೆಲ್ಲಕರಿಸಿತಾವು । ಅವರಿಗುಪಚಾರಗಳ ಅತಿಹರುಷದಿಂಮಾಡಿವಿವರದಿಂತನ್ನ ಚಾವಡಿಯಮುಂಧೆ। ಕನಕಚಪ್ಪರ ವಿಕ್ಕಘನರತ್ನ ತೋರಣವಮನೋಹರುಷದಿಂಕಟ್ಟಿಮತ್ತೆಯಿನ್ನು । ತನ್ನಸುತೆಇರುವಅಂತಃಪುರಕೆ ತಾನಿನ್ನು । ಸುದತಿಯರಕಳುಹಿದನು ಶೃಂಗಾರವಮಾಡೆಂದು॥

ವ॥ಆಸಮಯದಲ್ಲಿ ದೇವತೆಗಳು ಈನಳರಾಜನ ರೂಪೋಪಾದಿಯಂತೆತಮ್ಮರೂಪು ಅವನರೂಪಂತೆ ಮಾಡಿಕೊಂಡು ನಳರಾಜನಸುತ್ತ

ಯಲ್ಲಿ ಕುಳಿತುಯಿರಲು ಅನಿತರೊಳುಭೀಮರಾಯನು ದಾದಿಯರೊಡನೆ ಯಿಂತೆಂದನೂ.

ಯಾಲಪದ ॥ ಕಾಮಿನೀಯೆದಮುಯಂತಿಕನ್ಯಾಕಾಮಿನಿಗೆಯಿನ್ನು॥ಪ್ರೇಮದಿಂದಾಶೃಂಗಾರಪಮಾಡಿಈಕ್ಷಣದಲ್ಲಿರಾಮದೇವಾನನ್ನು ಪೂಜಿಸಿ ॥೧॥ ಯಿಾಗಲೇದಮಯಂತಿಯನ್ನಾ ಭೀಗದೀಕರತರುವದೆಂದಾ । ಭೀಮರಾಯನುಹೇಳಕೇಳುತಾಲಾ ॥೨॥ ಆಶ್ರೀಯರೆಲ್ಲಾ ಪ್ರೇಮದೀಶೃಂಗಾರಮಾಡಿದರೂ । ಪನ್ನೀರುಯರದಾರುಬೇಗಾಚಿನ್ನಗೀ ನತುರುಬಂಕಟ್ಟಿರನ್ನಚಂದ್ರಗಾವೀಯುಡಿಸಿದರೂ ॥೩॥ ಕಸ್ತೂರಿತಿಲಕವನಿಟ್ಟುಶಿಸ್ತಿನಿಂದಾಪರಿಮಾಳಾದಹಂಸೆಗಮನೆಗೆ। ಧರಿಸಿಬೇಗಾದಿಆವನಿತೆಯರಾರುಮುತ್ತಿನಾಮೂಗತಿಯಾನಿಟ್ಟಾರು ॥೪ ಮತ್ತೆರತ್ನದೋಲೆಧರಿಸಿಮುತ್ತಿನಬೋಟ್ಟುಳವಡಿಸಿ । ರತ್ನಾದಾವಡ್ಯಾಣನಡುಮೀಗೆಆವನಿತೆಯರಾರೂಗತ್ತವಾಗಿಧರಿಸಿಸತಿಯಾರು ॥ ನೀಲಾದವುಂಗರವನಿಟ್ಟುಮೇಲಾದಂತಾ । ವಜ್ರಕಡಗಬಾಲಿಗೆಧರಿಸಿಸದರ್ಭಗಾ । ಅವನಿತೆಯರಾಮೇಲಾದಕಂಕಣವುಯಿಟ್ಟಾರೂ ॥೬॥ ಯಿಂತೂನಾನಾ ಭೂಷಣಗಳಕಾಂತೆಯರಾರು ಶೃಂಗಾರಿಸಿಸಂತೋಷದಿಂದಾಲಿಕರತಂದೂ। ರಾಮದೇವರಾಸ್ವಂತವಾದದೇವಾಲಯನ್ನೂ ॥ ಬಂದುದಮಯಂ ಶೀತಾನುಚಂದವಂದ । ಕರವುಮುಗಿದುಅಂದುಸ್ತುತಿಯಾ। ಮಾಡುತಿರ್ದಾಳೂಆದೇವಾರಿಗೆಚಂದದಿಂದಾಸಾಷ್ಟಾಂಗವೆರೆಗೀ ॥

ವ ॥ ಈಪ್ರಕಾರದಿಂದ ದಮಯಂತಿ ರಾಮದೇವರದೇವಾಲಯಕ್ಕೆಬಂದುಸಾಷ್ಟಾಂಗವೆರಗಿಸ್ತುತಿಮಾಡಿಕೈಮುಗಿದು ಯೇನೆಂದುಕೊಂಡಾಡುತಿರ್ದಳು

ದ್ವಿಪದೆ ॥ ॥ಜಯಜಯಶ್ರೀರಾಮಜಯಜಯಪ್ರೇಮ । ಜಯಭಕ್ತಮಂದಾರಜಯಮಹೋದ್ದಾರ । ಜಯಲೋಲಕಲ್ಯಾಣಜಯಜಗತ್ರಾಣಜಯತುಶ್ರೀರಮಾಪಕ್ಷ । ಜಯದೈತ್ಯಶಿಕ್ಷಜಯಪದ್ಮದಳನೇತ್ರಜಯಶುಭಗಾತ್ರ । ಜಯಕರುಣಾಪಾಂಗಜಯಕೀರ್ತಿಸಾಂಗಜಯಪಾಪಸಂಹಾರ ॥ ಜಯದಕಾರಜಯ ಬಾಹುಬಲಶೀಲಜ

ಯಧೀಶಪಾಲಜಯನಂತಸುತ್ರಾಮ । ಜಯಗುಣೋದ್ಧಾಮ ಜಯಪರಮಪದಯಾನಂದ ಜಯಪುಣ್ಯಾಬ್ಬೃಂದ । ನಿನ್ನಸ್ತುತಿಮಾಡುವರೆಯನ್ನಳವೆದೇವ ಯನ್ನ ರಕ್ಷಿಸಿಗಾಯೊ । ಪನ್ನಗಶಯನದೇವತೆಗಳೆಲ್ಲಬಂದುಕೂತಿರಲು ಯಿಂದ್ರಯಮವರುಣರು । ಧನಪತಿಯೊಸಹಯನ್ನ ಗೇಲಿಯಮಾಡಬೇಕೆಂದುತಾವು । ನಳರಾಜಚಂದ್ರನಕಳೆಯರೂಪಿನಂತೆ । ತದ್ರೂಪುಧರಿಸಿಬಂದವರುಕೂತಿರಲುಚಂದದಿಂದಲಿನಿಮ್ಮಕಾಪದಬಳಿಗೆಬಂದೆನಾಬೇಡಿದವರನೀಯ್ಯಬೇಕು । ದೇವತೆಗಳವಾತುಸರಿಗೂಡವಂತೆ । ವಿನಯದಿಂದನಳರಾಜನೆಯನಗೆ । ಅನುಕೂಲವಾಗುವವರನೀಯ್ಯೋದೇವ ಎಂದುಸ್ತುತಿಮಾಡಲುಶಿರಾಮದೇವ । ವರವಿತ್ತುಕಳಹಲುವೈಭವದಿಂದ । ಪರಮಪ್ರಸಾದವಕೈಕೊಂಡುಬೇಗಹರುಷದಿಂತನ್ನಸಖಿಯರುತಾವು । ಮುದದಿಪ್ಯಾಣದಿಂದಲಿಬಂದುತಮ್ಮರಸನಿಗೆತಮ್ಮತಂದೆಯುಭೀಮರಾಯನುನೋಡಿತನ್ನಸುತೆಯನ್ನುನೋಡಿಸಂತೋಷಪಟ್ಟು । ಕನಕದಪಲ್ಲಕ್ಕಿಯೊಳಗೆಕುಳ್ಳಿರಿಸಿ । ವಸುದೇವನೆಂಬೋಬ್ರಾಹ್ಮಣನನ್ನುಕರಸಿ । ವಸುಧೀಶಭೀಮರಾಯನುಹೇಳ್ದನಾಗ ॥

ಕಂದ ॥ ಬಾರೈಯ್ಯಭೂಸುರೋತ್ತಮ । ಯಿನಾರೀಮಣಿಗಿನ್ನುಸಕಲದೇಶದ । ಧೊರೆಗಳುಬಂದರುಯನ್ನುನತಿಚಂದದಿತೋರುತಬಾರೆಂದುಆಭೀಮರಾಯನುಹೇಳಲುವಿಪ್ರನೂ ॥

ವ ॥ ಇಂತೆಂದು ಆ ವಿಪ್ರನಿಗೆ ಹೇಳಲು ತನ್ನ ಸುತೆಯಕೂಡೆಯೇನೆನ್ನುತಿರ್ದ್ದನೂ

ಕಂದ ॥ ಮತ್ತಿನ್ನುತನ್ನಕುವರಿಗೆ । ವಿಸ್ತರಿಸಿದಭೀಮರಾಯಕೇಳೆಲೆಮಗಳೆ । ಚಿತ್ತಕೆಬಂದಧೊರೆಗಳ । ಹತ್ರಕೆನೀಪೋಗಿಪುಷ್ಪಮಾಲೆಯನಿಡುವದೂ ॥೧॥ ಇಂತೆಂದುಹೇಳಿದಕುವರಿಗೆ । ಸಂತೋಷದಿಭೀಮರಾಯಸಖಿಯರಿಗೆಲ್ಲಂ । ಮತ್ತೆಹೇಳಿದನುಕುವರಿಯ । ವಿಸ್ತಾರವನೆಲ್ಲತಾನುಅತಿಹರುಷದೊಳೂ ॥೨॥ ನೀವಿನ್ನುನನ್ನಕುವರಿಗೆ । ಭಾವಜಸಮರೂಪರಾದಧೊರೆಗಳತೋರಿಸಿ । ವೈಭವದಿನಾನುಬರುವೆನು । ಆನಂದದಿರಥವನೇರಿಅತಿಶೀಘ್ರದೊಳೂ ॥೩॥

ವ॥ಆಸಮಯದಲ್ಲಿ ವಸುದೇವನೆಂಬೋ ಬ್ರಾಹ್ಮಣನು ದಮಯಂತಿಯು ದಾದಿಯರಂ ಕರದುಕೊಂಡು ಪಲ್ಲಕ್ಕಿಯೊಳ್ ಕುಳಿತು ಬರಲು ಬಂದು ರಾಜಾಧಿರಾಜರಂ ತೋರುತಿರ್ದನದೆಂತೆನೆ.

ಸಾಂಗತ್ಯ ॥ ಬಾರಮ್ಮದಮಯಂತೀಯಿವಾರೇಳುಲೋಕದದೊರೆಗಾಳತೋರುವೆನೆಂದೂ ॥೧॥ ಕಲಕಂಠಿಯಿವಾತನುಕಾಳಿಂಗಭೂಪಾಲ । ಅಳಿವೇಣಿಯಿವನೋಡಿಬಾರೆ ॥೨॥ ದಮಯಂತಿಯಿವಾತಾನುಗೌಳಭೂಪಾಲನು । ಧರೆಯತಾನಾಳುತ್ತಾಲಿರುವಾ ॥೩॥ ಅಮ್ಮಯಿವಾತನುಕೇಳುವಂಗಭೂಪಾಲಾನು। ಸಂಗತಿಯಿಂದಾನೀಕೇಳೂ ॥೪॥ ಅಂಗನೆನೀಕೇಳುವಂಗಭೂಪಾಲಾನು । ಸಂಗತಿಯಿಂದಕೇಳಮ್ಮ ॥೪॥ ಕೇಳೀದಮಯಂತಿಕಾಳಿಂಗದೇಶಾದ ॥ ಯಿಳೆಯತಾನಾಳುವಧೊರೆಯಾಮದವತೀಯಿವಾತನುಮಹಾರಾಷ್ಟ್ರಧಾದೊರೆಮಗ । ಮಮತೇಯಿಂದಾಳುತಾಲಿರುವ ॥ ೭ ॥ ಕಮಲಾಕ್ಷಿಕೇಳಮ್ಮಾಕಾಶ್ಮೀರದೇಶಾವಇಳೆಯತಾನಾಳುವಧೊರೆಯಾ ॥೮॥ ಅಂಬುಜಾಕ್ಷಿಯೆಕೇಳುಕಾಂಭೋಜದೇಶಾದ। ಭೋಜಾನೆನಿಸಿಕೊಂಬಧೊರೆಯು ॥೯॥ ಕಲಿಕೀಯಿವಾತನುಕೇಳುಕನಾ೯ಟದೇಶಾವ । ಕರುಣದಿಂದಾಳುವಧೊರೆಯು ॥೧೦॥ ಮಧುರಾಕ್ಷಿಯಿವಾತಾನುಮಗಧದೇಶದ । ಧೊರೆಚದುರೆಕೇಳ್ವವಲ್ಲಭನೂ॥ ಜಲಜಾಕ್ಷಿಯಿವಾತನುಗುರ್ಜುವಾರದೇಶಾದ। ತೇಜಾದಾಧೊರೆಯಿವಾತನೋಡು ॥೧೨॥ ಪದ್ಮಿನೀಯಿವಾತಾನುಬಂಗಾಳದೇಶಾದ । ಭಾಮಿನೀಯಿತಬರ್ಬರವೂ ॥೧೩॥ ಅಕ್ಕಕೇಳೀವುಸೌರಾಷ್ಟ್ರದೇಶಾದೇಶಾದ । ಡಿಕ್ಕನಧೊರೆನೋಡುನೀನು ॥೧೪॥ ಇಂತುಯಿವಾವೇರೆಯೊಳಲ್ಲರತೋರುತ್ತ । ಕಂತುರೂಪನಬಳಿಗೆಬಂದೂ ॥೧೫॥ ನಳಚಕ್ರವರ್ತಿಯಂದದಿ । ಮತ್ತೆನಾಲ್ವರುಕುಳಿತೀರಕಂಡೂಬ್ರಾಹ್ಮಣನೂ ॥ ೧೬ ॥ ಚೆರಗಾಗಿನೋಡುತಬದಲೂಮಾತಿಲ್ಲಾದೆ। ತರುಣಿಗೆಪೇಳಾದೆಯಿರಲೂ ॥ ಸುದತಿಯರನುನೋಡಿಆದಮಯಂತಿಯು । ಮುದದಿಂದಯಿಂತೆಂದಳಾಗಾ ॥೧೮॥ ಇದುದೇವತೆಯರಮಾಯಾವು। ತಿಳಿಯದೆಯಂದುಚಿಂತೆಯೊಳುಯಿಂತೆಂದು ॥೧೯

ವ ॥ ಇಂತೆಂದು ದಮಯಂತಿಯು ಮತ್ತಿಂತೆಂದಳು.

ಏಕತಾಳ ॥ ನಳರಾಜನೆಂಬುವನೊಬ್ಬನಲ್ಲದೆಮತ್ತೆ । ಯಿಳೆಯೊ
ಳುನಾಲ್ವರುನಳರಾಜರುಂಟೆ ॥೧॥ ಯೆಂದುಅವರಾಬಳಿಯನಿಂದು ।
ದಮಯಂತಿಯೂ । ಚಂದದಿಂನೋಡಿಯಿಂತೆಂದಳಾಬಾಲೆ ॥ ೨ ॥
ನೀವುನಾಲ್ವರುವಂದುಭಾವದಿಕುಳಿತಿರೆ । ಯಾರೆಂದುತಿಳಿಯಾರೆಯು
ಮರಾವಲ್ಲಭಾರೆ ॥೩॥ ಜ್ಞಾನಪಾಲರುನೀವುಮಾನವತಿಯೂನಾನು ।
ಯಿಾವ್ಯೋರ್‍ಕಾದುವದುನ್ಯಾಯವೆನಿಮಗೆ ॥೪॥ ನಿಮ್ಮಂಥಾವರಿಗೆ
ನಾನುಸುತೆಯು । ಸಮಾನವುನನ್ನಿಷ್ಟುಕಷ್ಟಕೆಗುರಿಮಾಡಬಹುದೆ ॥
ಯೆಂದವಮಾತನುಕೇಳಿದೇವತೆಗಳುಯೆಲ್ಲಾ । ಯಿದುಚೋದ್ಯವೆಂದೆ
ನುತಪದರಾದೆಯಿರಲ. ॥೬॥ ಅದುನೋಡಿದಮಯಂತಿಯಿದುವ್ಯಾ
ಳೆಯನುತಾಲಿ । ಮುದದಿಂದನೋಡಿಯಿಂತೆಂದಳಾಬಾಲೆ ॥ ೭ ॥ ಇ
ದುಯೇನುಅಮರರೆಯಿಂತಾಕೆಲಸವುನಿಮಗೆ । ಹೃದಯದೊಳಗೆನಿ
ಮ್ಮಮಗಳುನಾನೆಂದು ॥೮॥ ಯಿನ್ನು ನಿಮ್ಮರೂಪುಚನ್ನಾಗಿತೋ
ರೆಂದು । ನನ್ನಾನುನಳರಾಜಚಂದ್ರನಿಗೆಕೊಟ್ಟು ॥೯॥ ಮದುವೆಯು
ಮಾಡೆಂದುಪದಗೀಪೇಳಲುಅವರು । ಮನದಿಸಂತೋಷವುತಾಳಿದೇವ
ತೆಗಳು ॥೧೦॥ ಸಂತೋಷದಿಂದಲಿದಂಶಿಗಮನೆಯುಮೆಚ್ಚಿ । ಯೆಂ
ದುಮೊದಲರೂಪುತಾಳಿದರವರೂ ॥ ೧೧ ॥ ಆದೆಕಂಡುದಮಯಂತಿ
ಯುದುರಾಗಿಹೋಗಿನ್ನು । ಚಂದದಿಂನೋಡಿದಳುಸಂತೋಷದಿಂದಾ॥
ನಳರಾಜಚಂದ್ರನನಳಿನಾಕ್ಷಿತಾನೋಡಿ । ಕೊರಳಿಗೇಹಾಕಿದಳುಹೂ
ಮಾಲೆಯನ್ನು ॥೧೩॥ ದೇವದುಂದುಭಿಮೊಳಗೆಹೂವಿನ । ಮಳೆಗರೆ
ಯೆಸೀವಿಯಿಂದಲಿಗಂಧರ್ವರೂಪಾಡೆ ॥೧೪॥ ರಂಭೆಯೂರ್ವಶಿಯಾ
ರು । ಮೇನಕೆನಾಟ್ಯವಮಾಡೆ । ತುಂಬೂರನಾರದರುಹೊಗಳೆಸಂತ
ಸದಿ ॥ ೧೫ ॥ ಅಷ್ಟದಿಕ್ಪಾಲಕರುಸುರಮುನಿಗಳುಸಹಾ । ಮತ್ತೆದೇ
ವೇಂದ್ರನುಬಂದುಕುಳಿತಿರಲೂ ॥೧೬॥

ವ ॥ ಇಂತೆಂದು ದೇವೇಂದ್ರನು ಅಷ್ಟದಿಕ್ಪಾಲಕರು ತಮ್ಮ ನಿಜ
ರೂಪುತೋರಲು ಅನಂತರೊಳು ದೇವೇಂದ್ರನು ನಳರಾಜನೊಡನೆ ಏ
ನೆನ್ನುತಿರ್ದಾನೂ.

ಜಂಪೆ ॥ ನಳರಾಜನೀನಿನ್ನುಅಳಿಯನಾದೆಯೊಯೆನಗೆ । ಇಳೆ

ಯೊಳಗೆನೀನುಂಯಜ್ಞವರುಪ್ಪುವಮಾಡೆ ॥೧॥ ಇಳೆಯೊಳಗೆನೀನೆಷ್ಟು ಯಜ್ಞಗಳಮಾಡಿದರೆ । ಅದುನನಗೆಸಂಪ್ರೀತಿಯಿಂದುವರಹೀಯೆ ॥ ಅನಿತರೊಳುಅಷ್ಟದಿಕ್ಪಾಲಕರುಬಂದಾಗ । ವಿನಯದಿಂದಲಿಪೇಳ್ದರು ನಳರಾಜನೊಡನೆ ॥೩॥ ಅಗ್ನಿದೇವರುಬಂದುಆಗನಳರಾಜನೊಳು । ಇಳೆಯೊಳಗೆಪ್ರಾರ್ಥಿಸಲುಸುಳಿವೆನಾನಲ್ಲಿ ॥೪॥ ಯಮಧರ್ಮರಾಯನುಂ ಯೆದುರಿಗೆತಾಬಂದು । ಕ್ರಮದಿಧರ್ಮವಮಾಡಬೇಕೆಂದುನೆನೆಯೆ ॥ ಅವರವನಾಕೊಟ್ಟೆನೆಂದು ಯಮತಾಪೇಳೆ । ಪ್ರೇಮದಿಂನೈರುತ್ಯ ಬಂದುತಾನಾಗಾ ॥೬॥

ವ ॥ ಇಂತೆಂದು ಅಷ್ಟದಿಕ್ಪಾಲಕರು ನಳರಾಜನಿಗೆ ಈ ಪ್ರಕಾರ ದಿಂ ಪೇಳುವ ಸಮಯದಲ್ಲಿ ಯಮವರುಣರು ಇಂತೆಂದರೂ.

ಆದಿತಾಳ-ಅರ್ಧರೇಖು ॥ ಅವನೀಶನೀನೆಷ್ಟುವರವಕೇಳಿದರೂಆಷ್ಟು ಶೌರ್ಯವಕೊಡುವೆನೆಂದನೈರುತ್ಯ । ವರುಣಾನುತಾಬಂದುವಸುಧೀ ಶನೀನುಜಲವೆಲ್ಲಿಬೇಕೆನಲುಜಲವನಾಕೊಡುವೆ । ಅನಿಲದೇವರುಬಂ ದುಅವನೀಶಲೇಸನೆ । ವಾಯುವೆಲ್ಲಿರುಕೇಳಿವದಗಿಸಿಕೊಡುವೆಧನ ಪತಿತಾಬಂದುಧರಣೀಶಲೇಶ । ಧನವೆಷ್ಟುಕೇಳಿದರುಧನವನಾಕೊ ಡುವೆ । ಶಂಬುಶಂಕರರಬಂದುಅವನೀಶಲೇಸಾ । ಲೇಸಾಗಿನೀನೆಷ್ಟುಭೂ ತಿಯಂಕೇಳಿ । ಅವರವನಾನಿತ್ತೆಯಂದಯಿಶ್ವರನು ॥

ವ॥ ಇಂತು ಅಷ್ಟದಿಕ್ಪಾಲಕರು ಪೇಳುವ ಅನಿತರೊಳು ದಮಯಂ ತಿಗೂ ನಳರಾಜನಿಗೂ ಮದುವೆಯಂ ಮಾಡುವ ವಿಸ್ತಾರವಂ ಪೇ ಳ್ವೆನದೆಂತೆನೆ॥

ದ್ವಿಪದೆ ॥ ಭೀಮರಾಯನುಆಗಅತಿಪ್ರೇಮದಿಂದ । ಚಪ್ಪರವಹಾ ಕಿಸಿದಚದುರತನದಿಂದ । ವಪ್ಪದಿಂಮೇಲುಕಟ್ಟುವಳಿತಾಗಿಕಟ್ಟಿ । ಮುತ್ತುಪವಳದಕುಚ್ಚುಮತ್ತೆತೋರಣವು । ಅರ್ಥಿಯಿಂಕಳಶಕ ನ್ನಡಿಚಂಬುಗಳನು । ಉತ್ತಮದವಸ್ತುವೂರ್ವಿಗೆಪೊಸತೆನಿಸೀ। ಮ ತ್ತೆಕುರುಜುಗಳಾಕಟ್ಟಿಸಿಮುಮತೆಯಿಂದಾಗ । ನಳರಾಜನಿಗೆಪಿಂಪ್ಸ್ಯಾ ಲಿರದುಪನ್ನೀರು । ಕರಕೆಕಂಕಣಕಟ್ಟಿಕರಕೆವುಂಗರವು । ವುಡಪಾ ರಪಾಟೆಪೆಂಡೆಯವನುಧರಿಸಿ । ದಮಯಂತಿದೇವಿಗೆಕ್ರಮದಿಂದತಾ

ವೂ । ಪನ್ನೀರುಮಜ್ಜನ ಸಿರುಮಬೇಗದಲಿ । ಸನ್ನುತಾಂಗಿಗೆವಸ್ತ್ರಾ
ಭರಣವಂಧರಿಸಿ । ವಾಲೆಮೂಗುತಿಕಂಠಮಾಲೆಯುಂಧರಿಸಿ । ಮೇಲಾ
ದಪವಕೆವಮಬಾಲೆಗೆಧರಿಸಿ ॥ ಹೊನ್ನಮುದ್ರಿಕೆಯುಚನ್ನಿಗಗೆಧರಿಸಿ ।
ಚನ್ನಾಗಿನವರತ್ನೋಳುಬಾದಿಯುಂಧರಿಸಿ ॥ ಮುತ್ತಿನಬೊಟ್ಟುಕುರುಬಿ
ನಕುಚ್ಚು । ಬೆಲೆಯುಹೊನ್ನ ಚಿಂತಾಕುಚನ್ನಾನೆಸುವೂ । ನಡು
ವಿನೊಡ್ಯಾಣವುಕಡಗಮುತ್ತುಗಳು ॥ ನವರತ್ನದಾಭರಣನವಯೌ
ವ್ವನೆಯರಾಗ । ನಳಿದೋಳುಭುಜಕೀರ್ತಿನಯದಿಂದಧರಿಸಿ । ಮೇ
ಲುಪಚ್ಚೆಯುಶೀರೆನಾರಿಗೆವುಡಿಸಿ । ಭವನದೊಳಗಿರುವನವರತ್ನದಾಭ
ರಣ । ನವಯವ್ವನೆಯರಾಗನಾಟ್ಯಗಳಿಂದ । ದಮಯಂತಿದೇವಿಗೆ
ಧರಿಸಿಕಂಕಣವ । ಮೆರೆವತೋಂಡಿಲಧರಿಸಿಛಂದದಿಂದೆತಾವುಇಂತುಶೃಂ
ಗರಿಸಿದರು ॥ ದಮಯಂತಿಗಾಗ ॥ ಅನಲರಾಜನಿಗೆಅತಿಸೊಬಗಿನಿಂ
ದ । ಧರಿಸಿದಾಭರಣವಿವರವಂಕೇಳಿ । ತಲೆಗೆಕಿರೀಟವುಬೆಲೆಯಿಲ್ಲವೆನಿ
ಸಿ । ಮೇಲಾದಭುಜಕೀರ್ತಿಲೀಲೆಯಿಂಧರಿಸಿ । ಮುತ್ತಿನತುರಾಯಿಂಗ
ಳುಮುದದಿಂದಧರಿಸಿ । ಕೆತ್ತಿದವುಂಗುರವುಬೆರಳಿಗಳವಡಿಸಿ ॥ ಕನಕ
ನಿರ್ಮಿತವಾದಸರಿಗೆಶಾಲುಗಳು । ಗಂಧಪರಿಮಳಗಳಸುಚಂದದಿಂಧ
ರಿಸಿ । ಘನವಾದವಸ್ತ್ರಗಳುವಿನಯದಿಂಧರಿಸಿ ॥ ಮುತ್ತಿನಬಾಸಿಂಗ
ಕಟ್ಟಿಪಣೆಯಲ್ಲಿ । ಮುದಹುಗನವೆನುಮುದದಿಂಪತಾವು ॥ ಯಿಂತು
ಶೃಂಗರಿಸಿಅತ್ಯಂತಹಸೆಯೆಡೆಗೆ । ಕಂತುರೂಪನನು ದಮಯಂತಿ
ಯಿರ್ವ್ವರನು । ಬ್ರಹ್ಮನಿರ್ಮಿತವನ್ನು ಬಗೆಗೊಳಿಸಿಬೇಗಸುಧಾಮನ
ದಿಂಸಕಲಘೋರೆಗಳು ಯುಲ್ಲಧಾರೆಯನು ಯೆರೆಸಿದರು । ಧರ್ಮವು
ಹೂರ್ತದಲಿಭೋರಿಡಲು ॥ ಸುರವಾದ್ಯಭುವನದೊಳಾಗ ।ತಾಳಿಯನು
ಕಟ್ಟಿಸುತಮ್ಮವುತ್ಸಹದಿ ।ಲೀಲೆಯಿಗೆಸಂಭ್ರಮದಿನಿಂದುಃನಿಮಿಷರು
ಇಂತುಭೂಮಂಡಲದೊಳುಯಿನಿತುದೇವರುತಲಿ । ಗಜಬಿಜಿಯಿಂದುಮೇ
ಳಗಳಮೆರವಣಿಗೆರಣವು । ಕರಡಿಡಿಂಡಿಮಭೇರಿಕನಕತಪ್ಪಟೆಯು । ಕನ
ಹಿಕಾಳೆಯುಮೌಳಿಪರಿಯುತಲಿರಲು । ಲೀಲೆಯಿಂನೇರಿಟಿಸುತನುತ್ಸಂ
ಭ್ರಮದ ಬಾಲೆಯರುತಾಬಂದುಹಾಸೆಯನಿಡಲು । ಭರದಿರಾಜರು
ಲ್ಲಸಕಲಸಂಭ್ರಮದಿ । ಕರಕಂಕಣವುಕಟ್ಟಿಕಡುಚಲ್ವಿನಿಂದ ।ಪುರಜನ

ರು ಪರಿಜನರು ಸಂಭ್ರಮದೊಳಾಗ । ಧರೆಪೊಗಳುತಲತಿಚೋದ್ಯದಿಂದ ಮಾಡಿದರು ಮದುವೆ ॥ ವ ॥ ಇಂತು ಚತುರ್ದಿಕ್ಕೈವತ್ತಾರು ದೇಶದ ಧೊರೆಗಳು ಶಾಸ್ತ್ರೋಕ್ತದಿಂ ಧಾರೆಯುಂ ನೆರದು ರತ್ನ ಮಂಟಪದಲ್ಲಿ ಮುತ್ತಿನ ಗದ್ದಿಗೆಯಂ ಹಾಕಿಸಿ ನಳರಾಜನ ಬಳಿಯಲ್ಲಿ ದಮಯಂತಿಯುಂ ಕುಳ್ಳಿರಿಸಿ ಮುತ್ತೈದೆಯರು ಧವಳಶೋಭಾನೆಯಂ ಪಾಡುತಿರ್ದರದಂತೆನೆ.

ಶೋಭಾನೆ ಪದ ॥ ಹರಿಯು ವರವನು ಹರುಷದಿಂ ನೆರೆಪಡದೂ ॥ ಧರೆಯೊಳು ಕೀರ್ತಿವೆರರಿದಾ ಧರೆ ಕೀರ್ತಿವೆರಸಿದ । ನಳರಾಜಗೆ ವಾರನಾರಿಯರು ನೀವು ಶುಭವೆನ್ನಿ ॥೧॥ ಕಮಲನಾಭನ ಕರುಣದಿಂದಲಿ ತಾನೂ । ವಿಮಲಪುರುಷನ ನೆರೆಪಡದಾ । ದಮಯಂತಿಗೆ ಕಮಲಮುಖಿಯರು ಶುಭವೆನ್ನೀ ॥ಶೋ॥ ಮುರಹರನ ವರದಲ್ಲಿ ಪುರುಷನ ನೆರೆಪಡದು ಹರುಷದಿಂ ತಾನು ನಲಿಯುವಾ । ದಮಯಂತಿಗೆ ಸರಸಿಜವದನೆಯರು ಶುಭವೆನ್ನೀ ಶೋ ॥ ಕೃಷ್ಣನ ವರದಿಂದಲಿಷ್ಟಭಾಗ್ಯವಪಡದು । ಮತ್ತೆ ದಮಯಂತಿಯ ಕರವಿಡಿದಾ ರಾಜನಿಗೆ ಶ್ರೀಯರೆಲ್ಲಾ ಸುಭವೆನ್ನೀ ॥೪॥ ಗುಡುಗರಿಹೋಜೇರಕಂಡು ಬಾಳ್ದರು ಗಂಡಭೇರುಂಡ ನೃಪಸಿಹ್ಮ । ನಳರಾಜಗೆ ಪುಂಡರೀಕಾಕ್ಷಿಯರು ಶುಭವೆನ್ನಿ ॥ಶೋ॥ ಅರಿಗಳ ಸಂಹರಿಪ ಹರಿಯನ್ನು ಪೂಜಿಪ । ಮರೆಹೊಕ್ಕಜನರ ಸಲಹುವ । ಲೋಕವನೆಲ್ಲ ಸಲಹುವ ನಳರಾಜಗೆ । ಲೋಕಾದಜನರು ಶುಭವೆನ್ನೀ ॥ಶೋ॥

ವ ॥ ಇನ್ನು ಮುತ್ತೈದೆಯರು ಶೋಭಾನವಂ ಪಾಡಿ ಮಂಗಳಾರತಿಯನೆತ್ತಿದರದಂತೆನೆ.

ಮಂಗಳಾರತಿ ॥ ಜಯಮಂಗಳಂ ನಿತ್ಯಶುಭಮಂಗಳಂ ॥ಪ॥ ಶೃಂಗಾರರೂಪನಿಗೆ ಶ್ರೀಹರಿಯಭಕ್ತನಿಗೆ । ತುಂಗವಿಕ್ರಮನಾಗಿ ಮೆರವ ನೃಪಗೆ । ಸಂಗೀತಸಾಹಿತ್ಯ ಸಕಲಪ್ರವೀಣನಿಗೆ । ಅಂಗನೆಯರೆಲ್ಲ ಆರತಿಯೆತ್ತಿರೆ । ಜಯಮಂಗಳಂ ನಿತ್ಯಶುಭಮಂಗಳಂ ॥೧॥ ನಳರಾಜಚಂದ್ರನಿಗೆ ಕಳೆಯುಳ್ಳ ಕಾಂತನಿಗೆ । ಇಳೆಯನೆಲ್ಲವನು ಪಾಲಿಸುವಗೆ । ಸುಳಿಗುರುಳು ನೀರೆ ದಮಯಂತಿಯನು ಕೈಪಿಡಿದು ಪೊಳೆಯುತಿಹ ನಳರಾಜಚಂದ್ರನೃಪಗೆ ॥ಜ॥ ಭೀಮರಾಯನಸುತೆಯ ಕಲ್ಯಾಣನಾದವಗೆ ।

ಶೀವೆಗಳನೆಲ್ಲಕಾಲಿಸುವಾತಗೆ ॥ ಅಮಿತಾಶ್ರೀಹರಿಯೆ ನುಜ್ಞೆಯ್ಯ ನುಪಡವಂತ । ಕಾಮಸನ್ನಿಭನಾದ ನಳರಾಜಗೆ॥ಜ ॥೩॥ ನರಲೋಕ ಕಾಲನಿಗೆ ಶರಧಿಗಂಭೀರನಿಗೆ। ಪರವಧುಗಳಸಹೋದರನೆನಿಪಗೆ।ಧೊರೆಗಳಿಗೆರತ್ನಧುರವೀರನೆಂದೆನಿಸುವಗೆ। ಹರಿಭಕ್ತನಾದನಳರಾಜನೃಪಗೆ॥ಜ ॥೪॥ ಕಂತುಸಮರೂಪಗೆಕಾಂತಿಯಾಪುರುಷನಿಗೆ ॥ ಪಂಥದಿಂ ಲೋಕವನುಪಾಲಿಸುವಗೆ। ದಂತಿಗಮನೆಯುಯೆಂಬದಮಯಂತಿದೇವಿಯನು। ಅತ್ಯಂತಹರುಷದಿಂಕೈವಿಡಿದಗೆ॥ಜ॥೫॥ ವ॥ ಇಂತುಮಂಗಳಾರತಿಯನೆತ್ತಿ ಸತಿಪುರುಷರಿಗೆ ನಾಗವಲ್ಲಿಯ ಕಾಸ್ತ್ರನಂಮಾಡಿ ವಸಂತವಾಡಿ ಪನ್ನೀರಂನೆರದು ಕಂಕಣಬಾಸಿಂಗ ತೋಂಡಿಂಬಿಚ್ಚಿ ಸತಿಪುರುಷರಂ ಸಮರಸದಿಂಗೂಡಿಸಿ ಸಜ್ಜಗೃಹಕಂಕಳುಹಿಸಿ ಸಂತೋಷದಿಂದಿರಲು ಆಸಮಯದಲ್ಲಿ ಸೂರ್ಯನು ಸ್ವಾರಿಗೈದುಬಂದನೆಂತೆನೆ.

ತ್ರಿಪುಡೆ ॥ನಾಗಶಯನನಭಕ್ತನಾದಗೆಯಿನಾಗಮದುವೆಯು॥ ಆದನಾತ್ರೆಯನಾತ್ರಿಜಗಕೆರಪುವರೆಸೂರ್ಯನುಸಾಗಿಪೋದಾ॥೧॥ಖಗಗಳಾಟವುನಿಂತುಲೋಕದಿ ಯೋಗವಕತ್ತಲೆಯೊಳಗೆನಭದೊಳು । ನಗುತಲಿರ್ದವುತಾರೆಚಂದ್ರನುಸೊಗಸುಮೈದೂ ॥೨॥ ಅಕ್ಕರಿನಸತಿ ಪುರುಷರಿಗೆರತಿಸೊಕ್ಕಿತೆಂಬಾಚರಿಪತೆರಿಪತೆರದೊಳು। ಕುಕ್ಕುಟಗಳು ಮೊತ್ತಕೂಗೆದೊದ್ದಿಕ್ಕುದೆಶೆಗೆ ॥೩॥ ಧೊರೆಯನಿಸಿತಾರೆಗಳುತೆರಳ್ದವುಭರದಿಖಗತತಿನಲಿಯುತಿರ್ದವು । ಅರುಣದೋರಿತುಪೂರ್ವದೆಶೆಯೊಳುನರರುಯೆಚ್ಚರಿಸಿ ॥೪॥ ಮುಂದೆನಿಷಧಾಪುರಕೆ ತಾನೊಚಂದದಿಂದಾಸತಿಸಹಿತಪೋಗುವ । ಅಂದಗಳನೋಡುವರೆಸೂರ್ಯನುಬಂದನಭಕೆ ॥ ೫ ॥

ವ॥ ಇಂತೊಪ್ಪುವಸೂರ್ಯೋದಯಕಾಲದಲ್ಲು ಸತಿಪುರುಷರು ಯೆದ್ದು ಹಿರಿಯರನೆನೆದು ಮುಖಮಜ್ಜನವಂಮಾಡಿ ಹರಿಸ್ತುತಿಯಂಗೈದು ಮೃಷ್ಟಾನ್ನವಂ ಸವದು ತಾಂಬೂಲವಂರುಚಿಗೈದು ಸಂತೋಷದಿಂದಬಂದಂಥಾ ಚತುರ್ದಿಕ್ಕ್ಯವತ್ತಾರುದೇಶಾಧೀಶ್ವರರಿಗೆಮೃಷ್ಟಾನ್ನದಿಂದ ತೃಪ್ತಿಪಡಿಸವುಡುಗರೆವುತ್ಸಾಹಂಗಳಂಮಾಡಿತಾಂಬೂಲ

ವಂಕೊಡಿಸಿ ಬ್ರಾಹ್ಮಣರಿಗೆ ಭೂರಿದಾನಗಳಂಮಾಡಿಸಿ ಯಿನ್ನುಯಿರತಕ್ಕಂಥಚತುರ್ದಿಕ್ಕೈವತ್ತಾರು ದೇಶಾಧೀಶ್ವರರಿಗೆ ದಾನವಂಕೊಡಿಸಿಯಿನ್ನು ಬಂದಂಥಾ ಬಂಧುವರ್ಗಂಗಳಿಗೆ ಸಕಲೋಪಚಾರದಿಂದ ಕಳುಹಿಸಿಸುಖದಿಂದ ಸತಿಪುರುಷರು ವಿದರ್ಭಾಪುರದೊಳಿರುತಿರಲು ಯಿತ್ತಲಾಶನಿರಾಜನು ದೇವೇಂದ್ರನಬಳಿಗೆ ಬರುವವಿಸ್ತಾರವಂ ಹೇಳ್ವೆನದೆಂತೆನೆ.

ರಾಗ - ಕಲ್ಯಾಣಿ ॥ ಶನಿರಾಜತಾನೆಬಂದಾನು । ದೇವೇಂದ್ರನಬಳಿಗೆ॥ಶನಿರಾಜ ॥ಪ॥ ಶನಿರಾಜತಾನೆ ಬಂದ ।ಮನದಿಸಂತೋಷದಿಂದ। ಅನುಮಾನವಿಲ್ಲದೆಸಹಸ್ರನಯನನಬಳಿಗೆ ॥೧॥ ಮುದದಿಂದಕೇಳಿಹೇಳುವೆ। ಯೆಂದೆನುತಾಗಬಂದದಿಂದಲಿಪೇಳಿದಾ ।ದಮಯಂತಿದೇವಿಗಿನ್ನು ಮದುವೆವಾರ್ತೆಯಕೇಳಿ । ವದಗಿನಾಬಂದೆನುಅಜದೇವನಿಮ್ಮಬಳಿಗೆ ॥೨॥ ಘನಕೋಪದಿಂದಬಂದಾನು। ಆಶನಿರಾಜಮನದೊಳುರುದ್ರನಂದದಿಕೆಂಕಣ್ಣುಗಳೊಳು ।ಕಿಡಿಗಳನುಗುಳುತಕರುಣವಿಲ್ಲದೆಬಂದಕಮಲನಾಭನಬಳಿಗೆ ॥೩॥ ವ ।ಇಂತು ಶನಿರಾಜನು ಬಹುರೌದ್ರಾಕಾರದಿಂದ ಬಂದಂಥಾವನಂನೋಡಿ ನೀನು ಬಂದಕಾರ್ಯವೇನೆಂದು ದೇವೇಂದ್ರನು ಕೇಳಲು ಆಮಾತಿಗೆ ಶನಿರಾಜನು ಯೇನೆನ್ನುತ್ತಿದ್ದಾನು.

ಯಾಲಪದ ॥ದಿವಿಜಾರಾಜಾ ಕೇಳೋನೀನು ವಂದುಕೆಲಸಾವುಂಟು ಯೆನಗೆ ।ಭುವನಪತಿಯೂ ಭೀಮರಾಯನಾ ।ಸುತೆದಮಯಂತಿಕಮಲಮುಖಿಕಲ್ಯಾಣವಂತೆ ॥೧॥ ಧರೆಯೊಳವಳಸೌಂದರ್ಯಕೇಸರಿಯಿಲ್ಲಾ । ರಂಭಾದಿಸ್ತ್ರೀಯರು ಅವಳರೂಪುವರದುಪೇಳುವರೆ । ತೀರಾದು ಯೆನಗೆಭರದಿನಾನೇಪೋಗಿಬರುವೇನು ॥ ೨ ॥ ಮದುವೆಯಿವಳಿಗೆಂದಾದಿ ತೋಯೆಂದ ಮನದಿಕರಗೂತಿರ್ದೆ । ಅದುಯೀಗಾಕ್ಕೈಗೂಡಿತೆನಗೆ ।ಬಿಸುರರಾಜಾ ।ಆಗಸುರರಾನೋಳುಹೇಳಿದಾ ॥೩॥ ನಮಗೆವಂದುಪಕಾರಾವನೀನೋಯೆನಗೆಮಾಡಬೇಕು । ಕಮಲಮುಖಿಯಾವಲಿಕಿನಾನಿನ್ನಾ ।ಯಿಲ್ಲಿಗೆತರುವೆ । ಅಮರರಾಯಕೇಳನೀನೆನಲೂ॥

ವ ।ಇಂತೆಂದು ಶನೇಶ್ವರನು ಹೇಳಲು ದೇವೇಂದ್ರನು ಹುಸಿನಗೆ

ಯು ನಕ್ಕು ಯೀನೆನ್ನುತಿದಾ೯ನೂ.
ಸಾಂಗತ್ಯ ॥ ಮನುಜೇಶಪುತ್ರಿಗೆಮತ್ತೆಮದುವೇಯೆಂಬ । ವಿನ ಯಾದವಾತುಕೇಳಿನ್ನು ॥೧॥ ಯಮವರುಣರಾಜನುಧನಪತಿಸಹ ವಾಗಿ । ಪೋಗಿಯಿಂತಿಯಕೇಳೆನಾವೂ ॥೨॥ ನಮ್ಮನೂದಮಯಂತಿ ತಂಪೆರಮಾತೆರದೊಳು । ಸುಮ್ಮಾನದಿಂದಭಾವಿಸಲೂ ॥೩॥ ಆನಳರಾ ಜಗೆವರಿಸುತನಾರಿಯು । ಹರುಷದಿಂದಲಿವಡಗೂಡಿ ॥೪॥ ಮದುವೆಾ ದೆಳುವುತ್ತೆಆದಮಯಂತಿಯಾ ।ಅದುನೋಡಿಬಂದೇವೂನಾವೂ॥೫॥ ಯಾಕೆನೀನುಇಲ್ಲಿಗೆಪೋಗುವದೆಂದೂ।ಜೋಕೆಯಿಂದಲಿಹೇಳಲಾಗಾ॥ ಖತಿಗೆ.ಂಡೂಮನವಲ್ಲಿಕಂತೂಕೋಪವತಾಳಿ । ಕೆಮಲಾಜಾನೊಡ ನೆಯಿಂತೆಂದಾ ॥
ವ ॥ ಇಾತು ಶನಿರಾಜನು ಅತಿಕೋಪವಾತಾಳಿ ಮತ್ತೇನೆನ್ನುತಿ ದಾ೯ನೊ. ಅಟತಾಳ-ಅಧ೯ರೇಖು ॥ ಕೆಣ್ಣುಕೆಂಡಗಳಂತೆಬಣ್ಣೀ ಶಿತೆರದಾ । ಕಾಲಾಗ್ನಿರುದ್ರಾನಪೋಲಿಕೆಯಾದ । ಮುಖದೊಳುವುರಿ ಪೊಗೆಹೊರಡುತ್ತಾಲಿರಲೂ । ಕಟಕಟಯೆಂದುಹಲ್ಲುಕಡಿಯುತ್ತಲಾ ಗಾತಟತಟನೆತನ್ನೆದೆಯುಬಡಿಯುತ್ತಾಲಿದಾ೯ । ಕಾಲಭೈರವನೊತಾ ನುಕಾದಶೂರಿಯನೂ । ಘಜಿ೯ಸಿಗಾಢಾಂಧಕಾರದೊಳಗಾ । ನಿಜ೯ ರರುಬೆದರಲುನಿಂತುಯಿಂತೆಂದ ॥
ವ ॥ಇಂತೆಂದು ಶನೇಶ್ವರನು ಬಹುಕೋಪದಿಂದಾ ಮತ್ತಿಂತೆಂದ ನೊ. ಜಂಪೆ ॥ ಬಹುದಿವಸದಿಂದಾಆನಾರಿಯನುನಾನಿನ್ನು । ಕೋ ರಿಪೆ೯ಮದುವೆಯನುಆಗಬೇಕೆಂದು ॥೧॥ ಯಿಾಗಆನಾರಿಯನುತಾ ನುವ ಮದುವೆಯಾಗಿಹ್ಯಾಗೆಬಾಳುವನೊತಾನೀಗನೋಡುವೆನು ॥೨॥ ದೇವೇಂದ್ರನೀನುಮದುವೆಗೆಹೋಗೆನ್ನೊಡನೆ । ಒಂದುಮಾತುಸು ರರನೀಪೋಗಬಹುದೆ ॥೩॥ ಹೋದವರುಆಕಾರ್ಯಸಾಧ್ಯವನುಮಾಡ ದೆ । ಮುದದಿಂದಬರುವರೆಯಿಮನಿಮಗೆತರವೆ ॥೪॥ ಚಂಚಲಾಕ್ಷೆಯ ಕೇಳಿಕೊಂಚವಾಗಿಯುನೀನು।ಚಿಂತೆಯೊಳುಬರಬಹುದೆನಾಚಿಕೆಯಿ ಲ್ಲವೆ ॥೫॥ ನರರನ್ನುಸುರರಿಗೆಅಭಿಮಾನವತೆಗದುದಕೆ । ತಿರುಗಿಬರಬ ಹುದೆಶರೀರವಹೊತ್ತುನೀವೂ ॥

ವ ॥ಇಂತೆಂದು ಪೇಳಿದಶನಿರಾಜನೊಡನೆ ದೇವೇಂದ್ರನೇನೆನ್ನುತಿರ್ದಾನೂ. ದ್ವಿಪದೆ ॥ ಭೂಮಂಡಲವನೆಲ್ಲಆವಿಷ್ಣುಚಕ್ರವಂ । ಮೂಯೆದಿಂದಂಡಿಸುತ್ತಿರಲು । ಅಪರಿಮಿತವಾದಂಥಸರ್ವಜನರುಗಳ । ತಪ್ಪಿರ್ದಡೆಚಕ್ರಶೀಘ್ರಕೊಲ್ಲುವದು ।ಶನಿರಾಜನೀಕೇಳ:ಆನಳರಾಜ ಸಪ್ತಸಾಗರವನ್ನುಗುಪ್ತದಿಂತಾನು । ಸತ್ಯದಿಂದರಿಆಳ್ವನಳರಾಜ ಚಂದ್ರ । ಅವನಸತ್ಯವುಯಿನ್ನುಹದಿನಾಲ್ಕುಲೋಕದೊಳು । ಸರಿಗಾಣೆಖ್ಯಾತಿಯಲಿನಳನಹೇಳುವರಳವಲ್ಲಕೇಳೈಯ್ಯನೀನು । ಸಾಮಾನ್ಯಪವನೆನರಸಕೋವಿದನುತರಣಿವಂಶದಧೊರೆಯು ಧುರಧೀರನಾದ ಆಮಾರವಂತನುಅಧಿಕಶುಚಿತಾನುಅವನ ಸತ್ಯವನೆಲ್ಲಅರಸಿನೋಡಿಪೆವು । ನಿನಗೆಸಾಧ್ಯವುಆಗನಿನಿಗೆಅಸಾಧ್ಯ । ಓಶನಿರಾಜನೀಸುಮ್ಮನೆಯಿಷ್ಟುಕೋಪವನುಮಾಡುವದು ॥ನಿನಿಗೆಪಾಪಬರುತಿಹುದುಭೂಪಕೇಳೆನಲು। ಯೆಂದಮಾತನುಕೇಳಿದಾಶನಿರಾಜ । ಕೋಪದಿಂಮತ್ತೆರೌದ್ರಾಕಾರನಾಗಿ ॥ ಶನಿರಾಜಪೇಳಿದನುಘನದಿವಿಜಪತಿಗೆ।

ವ॥ ಇಂತು ದೇವೇಂದ್ರನಕೊಡೆ ಶನಿರಾಜನೇನೆನ್ನುತಿರ್ದಾನು ಸೊಬಗಿನಸೊನೆ ॥ಕನಲಿಕೋಪದೊಳುತನಗಿನ್ನು।ಘನವಾದಧೊರೆಗಳಿನ್ನಾರುತೋರೂ ॥೧॥ ತನ್ನಪೆಸರುಕೇಳಿದಾಕ್ಷಣಹರಿಹರರಿನ್ನು ಬ್ರಹ್ಮಾದಿದೇವತೆಗಾಳೂ ॥೨॥ ಯೆಲ್ಲಾರುಹೆದರಿಗೊಂಡೋಡುವರಲ್ಲದೆ । ನಿಲ್ಲೂವರಾರ:ನನ್ನೆದುರಾಗಿ ॥೩॥ ಗರುಡಖೇಚರಯಕ್ಷಗಂಧರ್ವರೆಲ್ಲಾರು ।ನನ್ನಯೆದುರೆನಿಲ್ಲುವರೆನಳನುಯೆಂಬುವನಿನ್ನುನರಮನುಷನಲ್ಲವೆ। ಅವನುನನ್ನೆದುರೆನಿಲ್ಲುವನೆಯೆಂದಾ ॥೪॥ ದಮಯಂತಿನಳರಾಜರಿಬ್ಬಾರು ಬಾಳುವಪಡುಪಾಟನೋಡ:ನೀನೆಂದಾ ॥೫॥ ಮತ್ತೆನೀಮೆಚ್ಚಲಿಬೇಕು। ದಿವಿಜೇಶವಿಸ್ತಾರಿಸುವೆಕೇಳುನೀನೆಂದಾ ॥೬॥ ನಾಮದುವೆಯಾಗುವ ದಮಯಂತಿಯುತಾಹ್ಯಾಗೆ। ತಂದುಕೊಂಡಿಹನೊಯಿನ್ನೂ ॥೭॥ ಮಾನವಾಧೀಶಾನಹಿಂಡಿಹಿಪ್ಪೆಯಮೂಡಿನಾನಾಪಾಡುಗಳಬೀಳಿಸುವೆನು ॥

ವ ॥ಇಂತೆಂದು ಪ್ರತಿಜ್ಞೆಯುತಾಳಿ ಮತ್ತಿಂತೆಂದನೂ.

ಯೆಕತಾಳ ॥ಜಾಜನಾಡ:ನಬುದ್ಧಿಪುಟ್ಟಿಸಿನಳನಿಗೆ । ರಾಜ್ಯವನೆ

ಲ್ಲವಪೋಗಲಾಡಿಸುವೆ ॥೧॥ ಅರಣ್ಯಭೂಮಿಗೆಪೋಗುವತೆರನು । ಮೂಡಿಮೂರುದಿವಸಅನ್ನಾವಿಲ್ಲಾದಿಇರಿಸಿ ॥೨॥ ಕಾಂಯುನೊಪ್ಪನತಿನ ಕೈಗಾಳವಮಾಡಿಸಿ । ಮಾಯಾದಿಂದಬಟ್ಟೆಯುಪಕ್ಷಿಗೆಕೊಡಿಸಿ ॥೩॥ ಮನೆಚನ್ನ ತಪ್ಪಿಸಿವನಿತೆಯುಹೋಗಾಡಿ । ಘನದುಃಖಪಡುವಂಥಾತೆ ರನ ಮಾಡುವೆನು ॥೪॥ ಕ್ರೂರರೂಪನ್ನುಮಾಡಿ । ಧೀರತಾನೋರ್ವ ರಸೇರಿ । ಅಡಿಗೆಯುಮಾಳ್ಪತೆರನಮಾಡುವೆನೂ ॥೫॥ ಯಿಸಾಮೇರೆಯೊ ಳೆನಾನುಮಾಡಿದಿರ್ದರೆಮತ್ತೆ । ಸೂರ್ಯಾನಮಗನಲ್ಲಸುರಪತಿಕೇ ಳೂ ॥೬॥ ನಳನಿಭಗಂಟನಾಗಿಯಿಳೆಯನಾಚರಿಸುವೆ । ಕಳೆಯುಳ್ಳದೆ ಪಂದ್ರಕೇಳಯ್ಯನೀನೂ ಯಿಸಾರೀತಿಮಾಡದಿರ್ದರೆಸೂರ್ಯಾನಮಗನ ಲ್ಲಾ । ಧೀರನೀನೋಡೆಂದುಪೂರಿಗೆಹೊರಟಾ ॥೭॥ ನಿಲ್ಲಾದೆತಾನಿನ್ನು ಮೆಲ್ಲಾನೆಪೋದಾನೂ ॥ ಚೆಲ್ವವಿದರ್ಭವುಂಬಪಟ್ಟಣಕ್ಕೆ ॥೮॥ ನ ಳರಾಜಚಂದ್ರನಕಳೆಯನೆಲ್ಲಾವನೋಡಿ । ಯಿಳೆಯೊಳಗನಿರಾಜನಿ ರುತಿರ್ದನಾಗಾ ॥೧೦॥

ವ ॥ ಇಂತೆಂದು ಶನೇಶ್ವರನು ನಳರಾಜನಬಳಿಗೆ ಬಂದು ಅವನ ಸತ್ಯ ಆಚಾರವಂನೋಡಿ ಹಿಡಿಯುವದಕ್ಕೆ ಮಾರ್ಗವಿಲ್ಲದ ಆ ನಳ ರಾಜನಕೊಡೆ ತಿರುಗುತಿರಲು ಮುಂದೆನಡಿಯುವ ವಿಸ್ತಾರವಂ ಕೇ ಳ್ವನದೆಂತೆನೆ

ತ್ರಿಪುಡೆ ॥ ಅನಿತರೊಳುನಳರಾಜಚಂದ್ರನು । ವಿನಯದಿಂಮಾ ವನನುಕೇಳಿದ ।ಜನಪನಿನ್ನಯಸುತೆಯುಕಳುಹುವದೆಂದುಬೇಗಾ ॥೧॥ ಯೆಂದವಾತಿಗೆಭೀಮರಾಯನುಚೆಂದದಿಂಪೇಳ್ದನು । ಮಂದಗಮ ನೆಯುವುಳುಹಿಕೊಂಬೆನೊಚದುರಕೇಳೊ ॥ ಕಳುಹುವೆನುನಾನೀಗ ಸುತೆಯನುವುಳುಹಿಕೊಂಡರೆವುಳಿವಳಲ್ಲನು । ಯಿಳೆಯವಲ್ಲಭಕೇಳ ಯುಂಮ ನೃಪನೂ ॥೨॥ ಪಂದುಅಳಿಯಗೆಪೇಳಿಭೀಮನುಬಂ ದುಸುತೆಗೀವಾರ್ತೆಪೇಳಿದ । ಯಿಂದುನಿನ್ನಾಪತಿಯುಪೇಳಿದವಾರ್ತೆ ಕೇಳೂ ।೪॥ ನಿನ್ನಕಳುಹುಸೆಂದುಪೇಳಿದ . ನಯದಿಂದಾನಿನ್ನಪುರು ಷನು । ಮನದಕೋಪವತಾಳಿಕೊಂಬುಪಕಳುಹದಿರಲೂ ॥೫॥ ಹೋ ಗಿಬರುವನುಮಗಳೆನ್ನಲು ಆಗಹಾಯೆಂ ನಳಂತಕುವರಿ ಯು । ಬೇ

ಗತಾಯಿಯುಬಳಿಗೆಬಂದಳುಅಳುತಲಾಗಾ॥೬॥ತಾಯೆಕೇಳಮ್ಮಯ್ಯೋಯಿಾಗಲುಯಿಾಯಡಿಗೆ ಕರತಂದುಪೇಳಿದ । ನ್ಯಾಯದಿಂದಲಿನನ್ನಪುರುಷನೀಗಲುತನ್ನಕಳುಹುಎಂದು ॥೭॥ ಯೆಂದವಮಾತನುಕೇಳಿನನ್ನಯತಂದೆಬಂದೂಪೇಳಲೂ । ಬಂದುನಿನ್ನೊಳುಪೇಳಿಪೋಗುವೆನೆಂದುನಃನೊ । ಯೆಂದುನುಡಿದಾಮುಗಳಮಾತಾನುಚಂದದಿಂದಾಕೇಳಿಮನದೊಳು । ಅಂದುಚಿಂತೆಯುತಾಳಿನುಡಿದಳುಪಡದತಾಯಿಾ ॥೯॥ ನಿನ್ನಕಾಣದೆಹ್ಯಾಗೆತಾಳುವೆ ।ನನ್ನಮುದ್ದಿನಕಂದಯನುತಲಿ।ಯಿನ್ನತಾಕಂಬನಿಯಸುರಿದಳುಕನಕಮುಯದೀ ॥೧೦॥

ವ॥ ಆ ಸಮಯದಲ್ಲಿ ದಮಯಂತಿಯ ದಾದಿಯರು ಈವಾರ್ತೆಯಂಕೇಳಿ ಬಂದುತಬ್ಬಿಕೊಂಡುತಕ್ಕೈಸಿ ಕಂಬನಿಯಂಗರೆಯುತ್ತಾ ಪನೆನ್ನುತ್ತಿರ್ದಾರೂ.

ಜಂಪೆ ॥ ದಮಯಂತಿದಾದಿಯರುದಾಸಿಜನರೂಸಹಿತ । ಗುಮಿಗೂಡಿಯಲ್ಲಾರುಕಂಬನಿಗರೆಯುತಿರಲೂ ॥೧॥ಅನಿತರೊಳುಅಭೀಮಜನನಾಥತಾಬಂದು । ತನ್ನಪುತ್ರಿಗೆಪೇಳ್ದಬುದ್ಧಿಯುಕ್ತಿಯನುಪೇಳುತಿರೆ । ಅನಿತರೊಳುಭೀಮರಾಯನವುಡದಿ । ಕಳೆಯುಳ್ಳಯಿಂದುಮುಖಿತಾಬಂದಳಾಗಾ ॥ ೩॥ ಬಂಡುಸುತೆಯನುನೋಡಿನೊಂದುದುಃಖಿಸುತಿರಲು । ಮಂದಗಮನೆಯನುನೋಡಿಯಿಂತೆಂದರಾಯ ॥೪॥ ಯಾಕೆದುಃಖಪೆನೀನುಯನುತಅದಾದಿಯರು। ಪ್ರೀತಿಯಿಂದೊರಸಿದನುಕಣ್ಣೀರುತೊಡದೂ ॥೫॥ ಮನ್ನಿಸಿದತನ್ನಸತಿಯನುತ ನು । ಸಂತೈಸಿಬಿನ್ನಾಣದಿಂತನ್ನಸುತೆಗೆಯಿಂತೆಂದಾ ॥೬॥ ಯಾಕೆದುಃಖಿಪೆಮುಗಳೆಯೇನುಕಡೆಮೆಯಿನನಗೆ । ಲೋಕವಾಳುವನಿನ್ನ ಪುರುಷನಳರಾಜಾ ॥೭॥ಸಲ್ಲಲಿತಸೌಂದರ್ಯಲಕ್ಷಣಾನ್ವಿತನಿನ್ನ । ವಲ್ಲಭನುಯೇಳುಸಮುದ್ರವುಪಿಕದಿಂದಾ ॥ ೮ ॥ಅಳುತಿರ್ಪನುಮಗಳೇಕೇಳುನಿನಿಗೇನ್ಕಡಮೆ । ಬಹಳಸಂತೋಷದಲಿಬಾಳಮ್ಮನೀನು॥೯॥ಅಂತಪ್ಪನಳರಾಜನಿನ್ನಿಂದಯನಗವನು । ಸ್ವಂತದಾಳಿಯನಾಗಿರಲಿಕಿನುಮಗಳೆ ॥೧೦॥ ಹೆಣ್ಣುಮಗಳೆಂದುನಿಂನನೋಡಲಿಲ್ಲಮಗಳೆ । ಗಂಡುಮಗನೀನೆಂದುಸಾಕಿಸಲಹಿದೆನು ನೀನೆನ್ನಹೃದಯದಿಜನಿಸಿದಾಕಾರಣ

ದಿ ॥ ನಾನುದೇವತೆಗಳನುಕಂಡೆಕರುಣದಲೀ ॥೧೨॥ ಬಹುದಿವಸತಡವಾಗೆನಿಲ್ಲಲೀಸದೆತಾಯೆ । ಬಾಲೆನಿನ್ನಯಕೊಡಲಿಕರೆಯುಕಳುಹಿಸುವೆನೂ ॥೧೩॥ ಅಮ್ಮನಿಮ್ಮಣ್ಣನನು ಹಿಂದೆಕಳಹುವೇನಮ್ಮ ಸುಮ್ಮಾನೆದಿಂಪ್ರೋಗುನುಂಮಾನೆಬ್ಯಾಡ

ವ ॥ ಇಂತೆಂದು ಭೀಮರಾಜನು ತನ್ನಮಗಳಿಗೆ ಬುದ್ಧಿಯಂಹೇಳಿ ಅಳಿಯನಂ ಪ್ರಾರ್ಥಿಸಿ ಕಳುಹಿಸುವ ವಿಸ್ತಾರವಂ ಹೇಳ್ವೆನೆಂತೆನೆ.

ಯಾಲಪದ ॥ ಹೋಗಿಬರುವಾದಂಪಾಯನಲ್ಲ॥ ಆಗತಾಯಿತಾಜಾನಕೆಮಣಿಸು । ಬೇಗದಿಂದಾಯೆತ್ತಿಮುದ್ದಾಡಿ । ಆಚಂದಾ ಸುಖಿಯುಆಗಬುದ್ಧಿಯನುಹೇಳ್ದಾಳು ॥೧॥ ಮನಸಿನೊಳಗೆಗುರುಭಕ್ತಿಯುಮರೆಯದೆ ನಡೆಯಮ್ಮನೀನು । ಕನಸಿನೊಳಗೂಪತಿವ್ರತೆಧರ್ಮಾಬಿಡಬ್ಯಾಡಿಯೆಂದು । ಮನ್ನಿಸಿಮಗಳೀಗೆಹೇಳ್ದಾಳು ॥೨॥ ಪತಿಯು ಶ್ರೀಪತಿಯಂತೆಭಾವಿಸಿನಡೆಯಮ್ಮಾನೀನೂಪತಿಯುಪಾತುಮೀರದೆ ನೀನಿರುತಿರಲೂ । ಅತಿಶಯದಾಸ್ವರ್ಗಾನಿನಗುಂಟುನಮ್ಮನೆತೊರೆಗಳೊಳಗೆನಿನ್ನನೀನುಕೀರ್ತಿತಂದು । ಕನ್ನೆನೀನೂಬಾಳಬೇಕಮ್ಮಾಯೆಂದೆನುತಾಗಾ । ಮನ್ನಿಸಿಬುದ್ಧಿಯಹೇಳ್ದಾಳೂ ॥೪॥ ಯಿನಾಗಕೇಳುನಿನ್ನಪುರುಷಬೇಗಕೋಪದಲ್ಲಿಬರಲೂ । ಆಗಯಿದುರುಮಾತಾನಾಡದೆ ಯೆಂದೆನ್ನುತಾಗಾವಂದಮತಿಗೆಬುದ್ಧಿಹೇಳ್ದಾಳೂ ॥೫॥ ನನ್ನಮ್ಮಾನನ್ನಕ್ಕಾಬಾರೆನನ್ನಮೋಹದಗಣಿಯೇಬಾರೆ । ಯನ್ನತಾಮುದ್ದಿಶೀಮುದದಿಂದಲಾಲಿಶೇಬೇಗಾದಿಂದಾಪೋಗಿಬಾರಮ್ಮಾಯೆನಲೂ ॥೬॥ ಯೆಂದಮಾತುಕೇಳಿಬಂದೂ । ತಂದೆಯಪಾದಕೆಮಣಿಯೆ । ಚಂದಾದಿಂದಾಯೆತ್ತಿಮುದ್ದಾಡಿ ಆಭೀಮರಾಯಚಂದದಿಂದಾಕಳುಹಿದನಾಗಲೂ ॥೭॥ ಅನೆಕುದುರೇಮಂದೀಸಹಿತವಡಗೊಂಡ ಆಭೀಮರಾಯ । ಹರುಷದಿಂದಾತಾನೂರಥವೇರಿ। ಆದಮುಯಂತಿಯತಡೆಯದೆಕಳುಹಿದಕುವರಿಯಾ ॥೮॥ ಮ್ಯಾಳತಾಳಭೇರಿಶಬ್ದಾ । ಕಹಳೆಬವರ್ಗರಭಸದಿಂದಾ । ಡೋಳುನಾಗಾರಿನಾಗಸ್ವರದಿಂದ । ಆಭೀಮರಾಯಹರುಷದಿಂದಾಮಗಳಕಳುಹಿದಾ॥ ಅರ್ಥಿಯಿಂದಪ್ರೋಗುತಿರಲೂ ॥ ಮತ್ತೆನಳರಾಜಾಬಂದೂ । ಅತ್ತೆಮಾ

ವನಕಾದಕೆನಿಮಿಸಾಲಊ ಆಭೀಮರಾಯನಾಯೆತ್ತಿನಿಮಿಶೀಕೆರವಾಮು ಗಿದಾನೊ ॥ ೧೦ ॥ ಮೊತ್ತದಿಂದಮುತ್ತೈದರೂ । ರತ್ನದಾರತಿ ಯಾತೆಂದೂ । ಸತ್ಯೇನಂತಗೆಯೆತ್ತಿಬೆಳಗಿದರು ॥೧೧॥ ದೇವಾದುಂ ದುಭಿಮೊಳಗಿದಾವು । ಹುವ್ವಿನಮಳೆಬೇಗಾಕರೆಯೆ । ದೇವತೆಯರು ಹರುಷದಿಂದಾಲಿನೋಡುತಾಲಿರೆ।೧೨।ಯಿಂದಾಹೋಗುತಿರ್ದಾರೂ ॥

ವ ॥ ಯಿಂತು ದಮಯಂತಿಯನು ನಳರಾಜನು ಕರದುಕೊಂ ಡುಸಂಭ್ರಮದಿಂದ ನಿಷಧಾಪುರಕ್ಕೆಬರಲು ಆ ಪಟ್ಟಣದ ಜನರು ಗುಂಪುಗುಂಪಾಗಿ ನೋಡುವ ಸಂಭ್ರಮವಂ ಪೇಳ್ವನದೆಂತೆನೆ.

ಯಕೆತಾಳ ॥ ದಮಯಂತಿಯನುತಂದುತಮತಮಗೆಲ್ಲಾರುಆ ಮದನಾರಿಯೊಯಂದಾಡುತಲೀ ॥೧॥ ಪ್ರೇಮದಿಂನೋಡಿರೆಯಿಾ ನಾರಿಮಣಿಯನ್ನ ॥ ಹೇಮಾದಬೊಂಬೆಯೋಸ್ವಾಮಿತಾಬಲ್ಲಾ ॥೨॥ ಕಾಮಕಂದರ್ಪನಾಪ್ರೇಮದನಾರಿಯೊ । ಕಾಮಿನಿಮಣಿಯಿನ್ನಸ್ವಾ ಮಿತಾಬಲ್ಲಾ ॥೩॥ಚಿತ್ರದಪ್ರತಿಮೆಯೊಪುತ್ಥಾಳಿಬೊಂಬೆಯೋ । ರ ತ್ನಾದಕಾಂತಿಯೋಯಿಾನಾರಿಯನ್ನ ॥೪॥ ಮನ್ಮಥನಕೈಲಿರುವೊ॥ ಪ್ರೇಮದಾಗಿಳಿಯೋಕಾಣೆ ।ಚಿನ್ಮಯಕೃಷ್ಣರಮನ್ನೆಣೆಯೊಕಾಣೆ ॥ ಪಾರ್ವತಿಸರಸ್ವತೀಧಾರುಣೀಯೊಳಗಿರುವ । ನೀರೆಯರೆಲ್ಲಯಿಾನಾರಿ ಗೆಸರಿಯೆರಂಭೆಯೂರ್ವಿಸಿಯುಮೇನಕಿ ತಿಲೋತ್ತಮೆಯೆಂಬಸ್ತ್ರೀ ಯಾರುಯಿಾನಾರಿಗೆಸರಿಯೊ ॥೭॥ ಯಿಂತುಅರ್ಥಿಗಳಿಂದಕಾಂತೆ ರೂಪನುನೋಡಿಸಂತೋಷಾದಿಂದಲಿಮಾತನಾಡಿದರೂ ॥೮॥ ಶುಭ ಲಗ್ನದೊಳಗಿನ್ನುನಗರವಶೇರಿದ । ಮಿಗೆಮಂತ್ರಿವಾರ್ಬಲಯೆಲ್ಲಾ ಕಳುಹಿದಾನೂ ॥೯॥ ತಮ್ಮ ತಮ್ಮ ರಮನೆಯತಾವುಶೇರಿದರಾಗ ॥ಸು ಮ್ಮಾನದಿಂದಾ ಆ ನಳರಾಜನಿರಲೂ ॥

ವ ॥ ಯಿಂತು ನಳರಾಜನು ಶುಖದಿಂದ ಯಿರುತ್ತಿರಲಾ ದಮ ನಾಖ್ಯನುಯೇನೆನ್ನುತಿರ್ದನೂ

ದ್ವಿಪದೆ ॥ ಅನಿತರೊಳುದಮನಾಖ್ಯಅವನೀಶನೊಡನೆ । ಏಂದಮ ಕರಗಳಮುಗಿದು ಯಿಂತೆಂದನಾಗ । ಜನನಾಥನಮ್ಮಪಟ್ಟಣಕೆ ಪೋಪೆನೆಂದು । ಪೇಳಿಯಿಂತೆಂದನಾನಳರಾಜನೊಡನೆ। ಕಲಕಂಠಿದ

ದಮಯಂತಿಕಾಮಿನೀಮಣಿಗೆ. ಆಪ್ತರುಯಾರಿಲ್ಲಆಕೆಯುಮ್ಯಾಲೆಕೋ
ಪವಮಾಡದೆದಯವಿಟ್ಟುನೀನು ।ರಕ್ಷಿಸುಯೆಂದೆನುತಬಿನ್ನೈಸಿ । ದ
ಮಯಂತಿದೇವಿಯುಬಳಿಗೆ । ದಮನಾಖ್ಯಬಂದುಯಿಂತೆಂದು । ಬು
ದ್ಧಿಯಹೇಳಿತಾನು ಅಮ್ಮಯ್ಯನಿನ್ನ ಪುರುಷನಮರ್ಮವಂತಿಳಿದು
ಸಮ್ಮತಿಯಿಂದಲಿಸಲಹಮ್ಮನೀನೊ । ಅತ್ತಿಭಕ್ತಿಯಿಂದಲಿಅತಿಪ್ರೇ
ಮದಿಂದ । ಸತಿಪತಿಗಳಿಬ್ಬರುಸಂತೋಷದಿಂದ । ನಾಡಿನಾಥರೆ
ಗಳನಾಡಿನಾಜನರು । ಯಿಹಾಡಾದಸತಿಯರುಜೋಡೀನಸ್ತ್ರೀಯರು।
ಮೆಚ್ಚುವಂದದಿನುಡಿಯೆವುತ್ಸಾಹದಿಂದ । ಯೆಂದುಬುದ್ಧಿಯಹೇ
ಳಿಆದಮನಾಖ್ಯ । ಚಂದದಿಂಪಟ್ಟಣಕೆಪ್ರೋಪೆನೆಂದೆನಲು । ತರಳಾ
ಕ್ಷಿತಮ್ಮಅಣ್ಣನಮುಖವನು ನೋಡಿವರಕುವರಿದಮಯಂತಿಕಂಬನಿ
ಗರದು ಅಣ್ಣನಿಗೆತಾನುಬಹುಬುದ್ಧಿಗಳಿಂದ ॥ ನೀತಿಮಾ
ರ್ಗಗಳಿಂದನಯನುಡಿಗಳಿಂದ । ಹೇಳಿದಳುತಾನಾಗನಳಿನಾಕ್ಷಿತಾ
ನು॥ ಅಣ್ಣಯ್ಯನೀಕೇಳುಸಣ್ಣವಳುನಾನುಹೇಳಿದಾಮಾತುಗಳುಕೇಳಿ
ನೀನೀಗ । ಅವನಿಯುಪ್ರಜೆಗಳುಅತಿಮೆಚ್ಚುವಂತೆಹರಿಷದಿಂಧೊರೆಗ
ಳುಅವನಿಯಾನೃಪರು । ಸಂಭ್ರಮದಿಂದಸಂತೋಷಪಡುವಂತೆ ।ತಾ
ಯಿತಂದೆಯುಮಾತುಮೀರದೆನೀನು । ಸಂದೇಹವಿಲ್ಲದೆಸಕಲಪ್ರಜೆಗಳ
ನುಧರ್ಮದಲಿಆಳ್ವೆಯ್ಯಮರ್ಮವಂತಿಳಿದು । ಅಮ್ಮನಾಮಾತುನೀನಾ
ಹಾವತೆರದಿ । ಸಮ್ಮತದಿಂದರಾಜ್ಯವನಡಸು । ಸಕಲಧೊರೆಗಳು
ಮೆಚ್ಚುವಂದದಿನೀನು । ಸುಖದಿಂದಬಾಳೆಂದುಹೇಳಿ ಅಣ್ಣನಿಗೆ।
ಸಕಲವುಡುಗರೆಗಳನುಸಂತೋಷದಿಂದ ಮಾಡಿಕಳುಹಿದಳಾಗಪದ್ಮಾ
ಯತಾಕ್ಷಿ । ಅನಿತರೊಳುದಮನಾಖ್ಯಅತಿಪ್ರೇಮದಿಂದ ಅರುಹೋದ
ಯದೊಳೆದ್ದು ಅತಿಪ್ರೇಮದಿಂದ । ಮುಖಮಜ್ಜನೆವಮಾಡಿಮುದದಿಂ
ದತಾನೂ । ಮುಂದಿಮಾರ್ಬಲವನ್ನುಚಂದದಿಂಕರಿಸಿ । ಅಂದಳಪಲ್ಲಕ್ಕೀ
ಯವರನುಕರಸಿ । ತಾಳಮ್ಯಾಳವುವಾದ್ಯಘೋಷಣೆಯಿಂದ । ಹೇಳಿ
ಹೊರಟನುತನ್ನನಿಜಪುರಿಗಾಗ । ಬಂದುಶೀಮೆಯನಾಳುತಿರ್ದನಾದ
ಮನನೂ.

ವ॥ ಅನಂತರದೊಳು ನಳರಾಜನು ದಮಯಂತಿಯೊಡನೆ ಸುಖತೆ

ಕೇಳಿಯೊಳಿರುತ್ತಿರ್ದನದೆಂತೆನೆ.

ರಾಗ-ರೇಗುಪ್ತಿ ॥ ಚಂದಿರವದನೆಯೊಡನೆನಳರಾಜನು । ಹೊಂದಿದಾರತಿಕೇಳಿಯೊಳಿರುವಂಥಾ ॥ ಚಂದಿರಪಚಂದವಪೇಳುವೇವ್ರೂಅಂದಬಂದಲಿಕೇಳೀ । ಮಂದಾರಭಕ್ತನಾದ ನಳರಾಜಸುಗಂಧಕಸ್ತೂರಿಪುನಗುಚಂದದಿಂದಾಲಿಪ್ರೂಶಿ । ಯಿಂದುಮುಖಿಯುತಾನುಆನಂದದಿಂದಾ । ಚಂದಿರಾ ॥೧॥ ಕಕ್ಕಾಸಕುಚಗಳ ಕರದಿಂದಪಿಡಿದಾಗ। ಅಕ್ಕರಿಂದಪ್ಪಿಮೆಚ್ಚಿ ದರುಮೋಹದೊಳಾಗ॥ ಸಕ್ಕರೆಚಂದುಟಿಸವಿದುರತಿಯೊಳುಸೊಕ್ಕಿಅಕ್ಕಾರಿದಾರ್ನುಅತಿಮೋಹಾದಿ । ಕಾಮಕೇಳಿಯೋಳಾಗಾಪ್ರೇಮದಿಂದರಿತಾನು । ಕೋಮಲೆಯೊಳುನೆರದುಕಾಮಸನ್ನಿಭರಾಜ ॥೨॥ ಯಿಂತುನಾನಾರತಿಕೇಳಿಯೊಳುತಾನು । ಕಾಂತೆಯುದಮಯಂತಿಅತಿಮೋಹಾದಿ । ಕಂತುಪಿತನಾಹರಿಯುಕರುಣದಿಂದಾಲಿಆಗ । ಅನಂತಆಯಿಶ್ವರ್ಯದಿಬಾಳುತ್ತಿರಲೂ ॥

ವ॥ ಈಪ್ರಕಾರದಿಂದ ದ್ವಾಪರಯುಗದಲ್ಲಿ ಬೃಹದಾಶ್ವಮುನೀಶ್ವರನು ಧರ್ಮರಾಯರಿಗೆ ಪೇಳಿದಂಥಾ (ನಲ್ಲಾರ್ಯಚಕ್ರವರ್ತಿಗಳ ಶಿಷ್ಯನಾದಂಥಾ ಜೀರಿಗೆಕೆಂಪಾರ್ಯ್ಯತಿರುಮಲಶೆಟ್ಟಿ ಸಹಾ ಯಿವರಿಗೆ ಕೊಮಾರನಾದಂಥಾ ಓದೋಕೆಂಪಯ್ಯನುಸಕಲಕವಿಗಳಿಗೆ) ಸಾಷ್ಟಾಂಗವೆರಗಿ ರಾಘವಾಚಾರ್ಯರು ಹರಿಕೃಪೆಯಿಂದ ತೆಲುಗಿನಲ್ಲು ಪೇಳಿದ ನಳಚರಿತ್ರೆಯನ್ನು ಕರ್ನಾಟಭಾಷೆಯಲ್ಲಿ ಯಕ್ಷಗಾನವಂಪಾಡಿನಾಟಕಕ್ಕೆಶೇರಿದಾತನು(ಅಂದೇನಹಳ್ಳಿ ಓಧೋಕೆಂಪಯ್ಯನು ವಿಸ್ತರಿಶಿದ ಕನ್ನಡನಳಚರಿತ್ರೆಯಪೂರ್ವಭಾಗಸಂಪೂರ್ಣಂ.)

ನಳಚರಿತ್ರೆ ಉತ್ತರಾರ್ಧ ಪ್ರಾರಂಭಃ.

ದ್ವಿಪದೆ॥ ಶ್ರೀಕರಜಾಂತಶೃಂಗಾರಗಾತ್ರ । ಪಾಕಾರಿರಿಪುಭೇದ್ಯಭವರೋಗವೈದ್ಯ । ಹರಿಭಕ್ತನಾದಪಾಂಡವರಾಜತನುಜ । ಧರ್ಮರಾಯನೆಕೇಳುಮುಂದಣಕಥೆಯ । ಯೆಂದುಬೃಹದಾಸ್ವಪೇಳಲುಧರ್ಮರಾಯಅಂದುಕೇಳಿದಕಥೆಯುಯಂದನಾನೀಗ । ಹರಿಕೃಪೆಯಿಂದಲಿ ಅತಿಸೊಬಗಿನಿಂದ । ಸಕಲಕವಿಗಳಿಗೆನಾನುಸಾಷ್ಟಾಂಗವೆರಗಿ । ಸಕ

ಲದೇವರನೆನೆದುಸದ್ಭಕ್ತಿಯಿಂದ। ಚಂದದಿಂಪೇಳುವೆಸಕಲರುನೀವು ಮುಂದೆಯಿಾಕಥೆಯುಆನಂದದಿಂಕೇಳಿ॥

ಜಂಪೆ॥ಯಿತ್ತಆನಳರಾಜಸಂತೋಷದಿಂತಾನು। ಕಾಂತೆಯೊಳು ರತಿಕೇಳಿಯೊಳಗೆಯಿರುತಿರಲೂ ॥೧॥ ಹರಿತಾನುಕರುಣಿಸಿದತರುಣಿ ಗರ್ಭದಿಕುವರ। ಹರಿದಾಡುತಿರೆಅವಳಪರಿಯಪೇಳುವೆನು ॥ಶರೀರಭಾ ರವುಆತರುಣಿಮುಖಬಿಳುಪಾಗೆಭರದಿ। ಆಕೆಯುನಡವುಬಹುದೊಡ್ಡಿ ತಾಗೆ। ನಡೆಯಲಾರದೆಆಕೆಬಳಲಿಬೀಳುತ್ತಿರಲು। ಕಡುಭಾರವಾಗೆಶ ರೀರವುಶಿಥಿಲಾತೆ ॥೪॥ ಒಂದೆರಡುಮೂರುನಾಲ್ಕೈದಾರುಯೇಳೆಂ ಟು। ಸಂಧಿಸಿತುನವಮಾಸವಿಂದುಮುಖಿಗಾಗ ॥೫॥ ಜನನಬಾಧೆಗ ಳಿಂದತನುವೆಲ್ಲನೋಯುತಿರೆ। ಅನಿತರೊಳುಸೂಲಗಿತ್ತಿಯರುಬಂ ದರಾಗ ॥೬॥ ವನಿತೆಯನುವುಪಚರಿಸಿಪುಣ್ಯದಿಂದತಾನು। ತನುಜ ನನುಪಡದಳುದಿನಪನಂದದಲೀ ॥೭॥

ವ ॥ಇಂತು ಆ ದಮಯಂತಿಯು ಕೋಟಿಸೂರ್ಯಪ್ರಕಾಶವಾದಂ ಥಾ ಕುಮಾರನಂ ಪಡೆಯಲು ಆವಾರ್ತೆ ನಳರಾಜನು ಕೇಳಲು ಸಂ ತೋಷವಂಪಟ್ಟು ಜೋಯಿಸರಂ ಕರೆಸಿ ಜಾತಕರಣವಂ ನೋಡಿ ಸಿ ತನ್ನ ಸರಿಧೊರೆಗಳನ್ನು ತನ್ನ ಬಂಧುಬಳಗವನ್ನು ಕರಿಸಿ ತನ್ನ ಕು ಲುಗುರುವಾದಂಥಾ ವಸಿಷ್ಟರುಷಿಗಳನ್ನು ಕರಿಸಿ ಜಾತಕರಣವನ್ನು ತೀರಿಸಿ ತನ್ನಕುಮಾರನಿಗೆ ಗುರುಮೂಲದಿಂದ ಯಿಂದ್ರಸೇನನೆಂ ಬುಹೆಸರನ್ನಿಟ್ಟು ಪುತ್ರೋತ್ಸವಂ ಮಾಡುತಿರ್ದಾರದೆಂತೆನೆ.

ಏಕತಾಳ ॥ ಧರಣೀಯಧೊರೆಗಳಿಗೆಪುರಜನಪರಿಜನಕೆಧೀರಾನು ಮೃಷ್ಟಾನ್ನಭೋಜನಾಬಡಿಸಿ ॥೧॥ ಉಡುಗರೆವುಚಿತವಸಡಗರದಿಂ ದಕೊಡಿಸಿ। ಬಿಡದೆವೀಳ್ಯಗಳನುಬಿಂಕದಿಂಕೊಟ್ಟು ॥೨॥ ಭೂಸುರರಿ ಗೆತಕ್ಕಭೂರಿದಾನವಕೊಟ್ಟು। ಆಶೆತೀರುವಂತೆಅರ್ಥಿಯಿಂದಾಗ॥೩॥ ಪುತ್ರೋತ್ಸವವನ್ನುಮಾಡಿಅರ್ಥಿಯಿಂದಿರುತಿರೆ। ಮತ್ತೆನಾರಿಯು ರುಪುತ್ರನತೂಗುತಿಹರೂ ॥೪॥ ಚಿನ್ನಾದತೊಟ್ಟಲೊಳುಚನ್ನಾಗಿಮ ಲಗಿಸಿ। ಸನ್ನುತಾಂಗಿಯುಸರಸದಿಂತೂಗೆ ॥೫॥

ವ॥ ಇಂತು ಆಕುಮಾರನ ತೊಟ್ಟಲೊಳುಮಲಗಿಸಿ ತೂಗುತಾ,

ಜೋಗುಳವಂ ಪಾಡಿದರದೆಂತೆನೆ.

ಜೋಗುಳಪದ ॥ ಜೋಜೋನಳರಾಜಜೋಪುಣ್ಯಚರಿತಾ । ಜೋಜೋದಮಯಂತಿವೋಹದಪುತ್ರ ॥ಜೋಜೋ॥ ॥ಪ॥ ಹರಿಭಕ್ತನಾದಂಥನಳಚಕ್ರವರ್ತಿ । ವರಕುಮಾರನೆಯಂದುವನಿತೆಯರುತೂಗಿ ಹರುಷದಿಂದಲಿಸುತನನೋಡಿ । ಅರಿದಾಗಿಭರವಸದಿತೂಗಿದರುಜೋಗುಳವಪಾಡಿ ॥ಜೋ॥ ॥೧॥ ಕುಡಿತೆಗಣ್ಣಿನಬಾಲೆಯರುಬೆಳಗಿನಿಂದಾಗ । ಕೊಂಕಗುರುಳಿನತೋರಮುಡಿಗಳೊಪ್ಪುತಲಿ । ಬಡನಡುವು ಬಳುಕುತ್ತಕಡಗಕಂಕಣದ । ಕರದಿಂದತೂಗಿದರುಕಡುಚಲ್ವಮಗನಾ॥ ೨॥ ಹಾರಪದಕವುಕೊರಳಮುತ್ತಿನಾಸರವು । ನೀರೆಯರುಶೃಂಗಾರವಮಾಡಿಬಾಲಕಗೆ । ವಾರನಾರಿಯರಿಗೆವದಗಿಸುತಸತಿ । ಸರನದಿಂದಲಿತೊಟ್ಲಪಿಡಿದುಅರ್ಥಿಯಲೀ ॥ಜೋ॥ ॥೩॥ ಸೋಗೆಕಣ್ಣಿನಬಾಲೆಬಿಣ್ಣಾಣದಿಂದಾ । ಅಂಗಭರಣವುತೂಗೆಅತಿಸೊಬಗಿನಿಂದಾ । ಕಾಲವುಂಗರಗೆಜ್ಜೆಸರಪಣಿಗಳಿಂದ । ಕಂಗೊಳಿಪಕಂದನಾಪಾಡಿಮುದದಿಂದಾ ॥ಜೋ॥ ॥೪॥ ವನಜದಳನೇತ್ರಿಯರುವೈಯ್ಯಾರದಿಂದಾಝುಣಝುಣರೆಂಬೋಭೂಷಣಗಳಿಂದಾ । ಘನಸತಿಯರೂನೆರದು ಅತಿಸೊಬಗಿನಿಂದಾ । ಬಾಲೆಯರುತೂಗಿದರುಬಾಲಕನಬೇಗಾ ॥ಜೋ॥ ಯಿಂತುನಾನಾಬಗೆಯವಿಸ್ತಾರದಿಂದಾ । ಕಾಂತೆಯರುತೂಗಿದರ ಅತಿಹರುಷದಿಂದಾ । ದಂತಿಗಮನೆಯರಾಗಸಂತೋಷದಿಂದ । ಕಂತುರೂಪನಸುತನಪಾಡಿದರುಚೆಂದಾ ॥ಜೋ॥ ॥೬॥

ವ ॥ಇಂತು ಜೋಗುಳವಂ ಪಾಡಿ ಅವರು ಕುಮಾರನ ಯೆತ್ತಿಕೊಂಡು ಶೃಂಗಾರವಂಮಾಡುತಿರ್ದಾರದೆಂತೆನೆ.

ಅಟತಾಳ ಆರ್ಧರೇಖು ॥ ತೊಟ್ಟಿಲೊಳಿಟ್ಟುತೂಗಾಡಿಸುತಿರಲು ದೃಷ್ಟಿಯದಂಡೆಯುಕಟ್ಟಿಕಾಯೊಳಗೆ । ಅರಳೆಲೆಮಾಗಾಯನಳವಡಿಸಿದಾರು । ಬೆರಳಿಗೆವುಂಗರವುಡಿದಾರಕಟ್ಟಿ ।ಕಂಠಸರವುಕಾಲ್ಗೆಜ್ಜೆಗಳಿಂದಾ । ಯಿಂತುಶೃಂಗಾರವಮಾಡಿಬಾಲಕಗೆ॥

ವ ॥ಇಂತು ಶೃಂಗಾರವಮಾಡಿದ ಮಗನಂನೋಡಿಸಂತೋಷವಂ ಪಟ್ಟುಸತಿಪತಿಗಳು ಯಿರುತಿರಲು ಮುಂದೆನಡೆಯುವ ವಿಸ್ತಾರವಂ

ಹೇಳ್ವನದೆಂತೆನೆ.

ಸಾಂಗತ್ಯ ॥ ಅದನೆಲ್ಲನೋಡಿದಾಳಿಶನಿರಾಜನು । ಹೃದಯದೊ
ಳಗೆಚಿಂತೆಪಡುತಾ ॥ ೧ ॥ ಪುತ್ರಾನಪಡದರ್ಥಯಿಂದಲಿನಳರಾಜ ।
ಬಿತ್ತಾರದಿಂದರಾಜ್ಯವನೂ ॥ ೨ ॥ ಅರ್ಥಯಿಂದಾಳುತಕರ್ತನೆನಿಸಿ
ಕೊಂಡು । ಚಿಂತೆಯಿಲ್ಲದೆಆಳುತಿಹನು ॥೩॥ ನಾನುಯಿಲ್ಲಿಗೆಬಂದು
ಯಿವನಸಂಗಡಯಿರಾಗ ।ತಿರುಗುವಂತಾಯಿತೆನ್ನಬದುಕೂ॥೪॥ ಹರಿ
ಹರಬ್ರಹ್ಮಾದಿಸುರರನ್ನುವೋದಲಾಗಿ । ಪರಿಪರಿಬಾಧೆಯಿಕ್ಕುವೆನು ॥
ಪಿಡಿಯಲಾರದೆಯಿವನಕೂಡೆತಿರುಗುವಂತಾಯಿತು । ಯಿದಕೇನು
ತಂತ್ರಮಾಡಲಿಯೆಂದೂ ॥೬॥ ದಮಯಂತಿನಾನುಮದುವೆಯಾಗು
ವೆನೆಂದು । ಅಮರಪತಿಗೇನಾನುಹೇಳಿದನೂ ॥೭॥ ಬಂದಕಾರಣದಿಂ
ದಯಿಂದುಯಿರಾರಾಜನು । ಸಂದರ್ಭವಿಲ್ಲದೆಯಿರಲೂ ॥೮॥ ಪುರಹೂ
ತನಾಗಲೆಹೇಳಿದನನಗಿನ್ನು । ತೀರಾದುನಿನ್ನಕೈಲೆಂದಾ ॥೯॥ ಯಂ
ದಮಾತನುಕೇಳಿಸಂದೇಹವಿಲ್ಲಾದೆ । ನಿಂದೊಕೋಪಮಾಡಿದಾನು ॥
ಪಂಥದಿಂದಲಿಬಂದೆಸಂತೋಷದಿಂದಲಿ । ಕಂತುರೂಪನಪಿಡಿಯು
ವರೆ ॥೧೧॥ ಪಿಡಿಯಲಾರದೆಬಿಟ್ಟುಹೋದರೆ । ದೇವೇಂದ್ರನೋಡಿಪನೆ
ನ್ನುವನೆಂದಾ ॥೧೨॥ ಯಿಂತುಚಿಂತೆಯಮಾಡಿಶನಿಯುಮನದೊಳು
ಮತ್ತೆದ್ವೇಷವಮಾಡಿಕೊಂಡು ॥ ೧೩ ॥ ಯೆಷ್ಟುದಿನವಾದರುಕಾದು
ಯಿವನನ್ನು । ಕಷ್ಟಪಡಿಸದಿರ್ದರಿನ್ನು ॥೧೪॥ ಶ್ರಿಷ್ಟಿಯೊಳಗೆಶನಿ
ರಾಜಯೆಂಬುವರೆನ್ನ । ಘಟ್ಟಮನಸೂಮಾಡಿದಾನೂ ॥೧೫॥ ಬಿಟ್ಟು
ಹೋದರೆತನ್ನಪಂಥವೇನಾಯಿತು । ದಿಟ್ಟದಿಂಶನಿಯುಕಾದಿರ್ದ ॥

ವ ॥ ಇಂತು ಶನಿರಾಜನು ಕೋಪಾರೂಢನಾಗಿ ಹಿಡಿಯುವದಕ್ಕೆ
ಮಾರ್ಗವಿಲ್ಲದೆ ಕಾದುಕೊಂಡು ಯಿರಲು ಇತ್ತಲಾ ದಮಯಂತಿ ಗ
ರ್ಭೋತ್ಪತ್ತಿ ಆಯಿತದೆಂತೆನೆ.

ಯಕತಾಳ ॥ ಆಮೇಲೆಕೆಲವುದಿವಸದಮೇಲೆದಮಯಂತಿಯು ।
ಪ್ರೇಮದಿಂಮತ್ತೆಗರ್ಭವುಅವತರಿಸೆ॥೧॥ ನವಮಾಸತುಂಬಿತಾನೋ
ರ್ವಕುಮರಿಯನ್ನು । ಭುವನಕಧಿಕವಾಗಿಪಡದಳಾದೇವಿ ॥೨॥ ಧರಣೀ
ಶತಾನಾಗತನ್ನಕುಮಾರತಿಗೆ । ತಾನುಮಾಡಿದನಾಗನಾಮಕರಣ

ವನೊ ॥೩॥ ಇಂದ್ರಸೇನೆಯೆಂಬಹೆಸರಿಂದಕರೆಯಿಸಿ । ಚೆಂದದಿಂಪು
ತ್ರೋತ್ಸವನುಮಾಡಿಸಿದನು ॥೪॥ ಅಶ್ವಮೇಧಾನೇಕಯಜ್ಞದಾನಗ
ಳಿಂದ । ಆಚಾರವಂತನಾಗಿಅತಿಹರುಷದಿಂದ ॥೫॥ ಸೀಮೆಭೂಮಿಗ
ಳೆಲ್ಲಆಮಹಾರಾಜನು । ಯೇಕಚಕ್ರಾಧಿತಾನುಜೋಕೆಯಿಂದಾಳ್ವ ॥
ಅನಿತರೊಳಗೇಒಂದುದಿವಸಆಭೂಪನು । ಕೈಕಾಲುತೊಳವಾಗಕಾಣ
ದೆತಾನೂ ॥೭॥ ಮುಳ್ಳುಮೊನೆಯಷ್ಟುನೆನೆಯಾದೆಯಿರುತಿರೆ । ಶನಿ
ರಾಜಕಂಡಾನುವುಲ್ಲಾಸದಿಂದಾ ॥೮॥ ಇನ್ನುಯನ್ನಯಪಂಥವಂ
ದಾಗಿಕೊಡಿತೂ । ಯಂದಶನಿರಾಜನುಸಂದೇಹವಳಿದೂ ॥೯॥ ಬಂ
ದೂಆಶನಿರಾಜವಂಮತ್ತೈಣವಿನರೂಪು । ಚೆಂದಾದಿಂದಲಿತೊಳಬಂ
ದುತಾನುಕೊಳಿತಾ ॥೧೦॥

ವ ॥ ಇಂತು ಶನಿರಾಜನು ನಳರಾಜನ ಪಿಡಿಯಲು ಧರ್ಮವಂಬಿಡದೆ ಆ ನಳರಾಜನು ಧರೆಯನ್ನಾಳುತಿರ್ದನದೆಂತೆನೆ.

ತ್ರಿಪುಡೆ ॥ ಮನುಜನಾಥನುಒಂದುದಿವಸದಿಂ ಕನಕಸಿಹ್ಮಾಸನ
ದಿ । ಯಿರುತಿರೆಶನಿಯುಮಾರುದಿಒಬ್ಬ ಶಬರನಹೀನರೂಪಿನಲಿ ॥೧॥
ಬಂದರೂಪನುಚೆಂದದಿಂದಕೇಳಿನೀವೂಹರುಷದಿ । ಮುದದಿಹೇಳು
ವೆಚದುರತನದೊಳುಒಬಂದೆವಿವರಾ ॥೨॥ ಸುರುಟುಕೊದಲುಸುತ್ತುಕ
ಟ್ಟೆಯುಅರ್ಥಿಯಿಂದಾಗೋಪ್ಯನೂ । ಶಿಖಿಗೆಮುಡಿದಿನ್ನುಬಂದನು
ಸೊಗಸಿನಿಂದಾ ॥ ೩ ॥ ಕಾಲುಕೈಗಳುಡೊಂಕಿನಂದದಿಲೀಲೆಯಿಂದಾ
ಬಂದಶಬರನು । ಹೇಳಲಳವೆಯಿವನರೂಪನುಕೇಳಿಯಂದಾ ॥ ೪ ॥
ದೊಡ್ಡಹೊಟ್ಟೆಯುಹಂದಿರೋಮವು । ಮೊಂಡುಕೈಗಳುಮರವಕಾ
ಲ್ಗಳು । ಮೂಗುನಡ್ಡರಗುಡುಸವೆಂದದಿಬಂದನಾಗ ॥೫॥ ಕೋರೆ
ಹಲ್ಲುಗಳಿಂದಆತನವಾರೆಬಾಯೊಳು । ಸೋರುಜಲ್ಲನೆಭೇರಿಹೊಟ್ಟೆಯ
ಯಿನ್ನಬಂದನುಶಬರನಾಗಾ ॥೬॥ ಯಿಾಪರಿಯರೂಪಿನೊಳುತಾನು
ಭೂಪನೆಡೆಗೆಬಂದನೂ । ಚಾಪವನುಕೈಯೊಳಗೆಪಿಡಿದುಮಣಿದನಾ
ಗಾ ॥೭॥ ವ ॥ ಇಂತು ಆ ಶಬರನು ನಳರಾಜನಿಗೆ ಕರಗಳಂ ಮುಗಿದು ಯೇನೆನ್ನುತಿರ್ದಾನೂ.

ಕೆರುಚುಜಂಪೆ ॥ ಕೇಳೈಯ್ಯಸ್ವಾಮಿಬಿನ್ನಪವಾ । ವಾನುಹೇಳು

ವೆನಿನಿಗೊಂದುಕನಸಾ ॥ ೧ ॥ ನಾನುಯಿರುವವನೆಯೊಳಗಿನ್ನು ।
ಸ್ವಾಮಿಘನವುಗವುಯಿರುತಿಹಾವಿನ್ನೂ ॥೨॥ ಕಡವೆಗಳುಸಾರಂಗ
ವಿಹವು । ಹುಲ್ಲೆಯುಡವಿಡದೆಯಿರುತಿಹವುಕೊಲ್ಲೆ ॥ ೩ ॥ ಹಂದಿಗ
ಳುಹುಲಿಯಿರುಬಿಹ್ಮಗಳುಯಿನ್ನು । ಅಂದವಾಗಿಹವುಕೇಳಿ ॥೪॥ ಝಿಲ್ಲಿ
ಮೃಗಜವ್ಯಾಜಿಮೃಗವುಯಿನ್ನು । ಚೆಲ್ವಿನಿಂದೆಸೆವಹೊಂಮೃಗವೂ॥
ಪಕ್ಷಿಗಳುಗುಂಪುಗುಂಪಾಗಿ । ಯಿನ್ನುಲಕ್ಷಯಿಹವುಕೇಳಿ ॥೬॥ ಲಾವು
ಗೆಯುಚಿಪಲಪಕ್ಷಿಗಳು । ಯಿನ್ನುಮೇಲಾದಹಂಸೆಗಳುಯಿಹವು॥೭॥
ಗಂಡಬೇರುಂಡಪಕ್ಷಿಗಳು । ಯಿನ್ನುಕಂಡಕಂಡದಿವಸದಿಕೇಳು ॥
ಕ್ಷೋಣಿಮೃಗಪಕ್ಷಿಗಳುಯಿಹವು । ಅದನುಯೆಣಿಸಲಳವೆಸ್ವಾಮಿಯಿ
ನ್ನೂ ॥೯॥ ಯಿನ್ನುಯಿರುವಪಕ್ಷಿಗಳುವನದಿ । ಯಿನ್ನುವರ್ಣಿಸುವ
ರಳವಲ್ಲದಯ್ಯ । ॥೧೦॥

ವ ॥ ಇಂತೆಂದು ಆ ಶಬರನು ಪೇಳಲು ನಳರಾಜನು ಕೇಳಿ ಸಂ
ತೋಷದಿಂದ ಆ ಶಬರನಂಕರದು ನಾಳೆ ಸೂರ್ಯೋದಯಕ್ಕೆ ಬ್ಯಾಟೆ
ಯನಾಡುವದಕ್ಕೆ ಬರುತ್ತೇವೆಂದು ಪೇಳಿ ಉಡುಗರೆಯಂ ತರಿಸಿಕೊ
ಟ್ಟು ಹೋಗೆನಲು ಅನಿತರೊಳು ಆ ಶಬರನು ಮಾಯವಾಗಿ ಪೋ
ಗಲು ಇತ್ತ ನಳರಾಜನು ಬ್ಯಾಟೆಯನ್ನಾಡುವದಕ್ಕೆ ತನ್ನ ಮಂತ್ರಿ
ಮಾಬಲನಂ ಕರಸಿ ಬ್ಯಾಂಟೆಗೆ ಪ್ರಯಾಣವಂ ಮಾಡುತಿರ್ದಾರದೆಂತೆ
ನೆ. ಜಂಪೆ ॥ ಧೊರೆಯುಪೇಳಿದನಾಗಕರಸಿಮಂತ್ರಿಯಕೊಡೆ ।
ಹರುಷದಿಂ ಬ್ಯಾಂಟೆಗೆಹೋಗಬೇಕೆಂದು ॥ ೧ ॥ ನಾವುನಾಳೆದಿವಸ
ಹೋಗಬೇಕೆಂದೆನಲು । ಹಾಗೆಆಗಲಿಯೆಂದುಆಮಂತ್ರಿಕೇಳ್ದಾ ॥೨॥
ಅನಿತರೊಳುಸೂರ್ಯನಸ್ತಾದ್ರಿಗಿಳಿದನುಬೇಗ । ಘನಮಾಯದೀಶನಿ
ಯುಅವನಿಯನುಮುಸುಕೆ ॥೩॥ ತಾರೆಗಳುಮುಳುಗಿದವುಪಾರೆಯಾ
ದವುಪಕ್ಷಿ । ಚಾರಕೋರಲುಯೆಲ್ಲವಿಸಾರಿತಾನಡಿಯೆ ॥೪॥ ಚಂದ್ರನು
ದಯಂಗೈಯ್ಯೋ ಅಂಧಮೊಳುತನಾಗ । ಬಂದುಕಂಡರುಚೋರಚೋ
ರರುಗಳಾಗ ॥೫॥ ಕಂಡುಮನದಲ್ಲಿಭೀತಿಗೊಂಡುಚೋರರುಬೇಗ ।
ಅಡಗಿದರುಚೋರುಚೋರರುಬೇಗತಾವು ॥ ೬ ॥ ಬೆಳ್ಳಿಮೂಡಿತುಆಗ
ಯೆಲ್ಲತಾರೆಯುಹರಿಯೆ । ನಿಲ್ಲದೆಕುಕ್ಕುಟವುಕೂಗಿದವುಬೇಗಾ ॥೭॥

ಪೂರ್ವದಿಶೆಯೊಳುಸೂರ್ಯನೇರಿಬರುತಿರಲಾಗ । ಸಾರೆಯುಚ್ಚ ರಿಸಿತಲೆ ದೂಗಿದರುನರರು ॥೮॥

ವ ॥ ಇಂತು ಸೂರ್ಯೋದಯದಲ್ಲು ನಳರಾಜನು ಯೆದ್ದು ಸ್ನಾನ ಸಂಧ್ಯಾದಿಕ್ರಿಯೆಗಳಂ ತೀರಿಸಿ ಗಂಧಪರಿಮಳಗಳಂ ಪೂಸಿ ಕಸ್ತೂರಿಯ ತಿಲಕವನ್ನಿಟ್ಟು ಚಿನ್ನದಶರಿಗೆ ರುಮಾಲುಸುತ್ತಿ ಮಲ್ಲಿಗೆಯುಂಮುಡಿದು ನವರತ್ನಾಭರಣವಂತೊಟ್ಟು ಅಪರಂಜಿಸರಿಗೆ ದುಪ್ಪಟಿಯುಂಹೊದ್ದು ಯಿಂತು ಶೃಂಗಾರವಂಮಾಡಿಬ್ಯಾಂಟೆಯನ್ನಾಡುವದಕ್ಕೆ ಭೇರಿಯುಂಹೊಡಿಸಿದರದೆಂತೆನೆ. ಸಾಂಗತ್ಯ ॥ ಆಗಭೇರಿಯಹೊಡಬಬ್ರಹ್ಮಾಂಡಗಳೆಲ್ಲ । ಕೂಗಿತಲ್ಲಣಿಸುತ್ತಾಲಿರಲೂ ॥೧॥ ಪಾತಾಳಲೋಕವುತತ್ತರಿಸುತಲಿರೆ । ಭೂತಭೇತಾಳಗಳ್ಬೆದರೆ ॥೨॥ ಸುರೆರುಬೆದರುತ್ತಿರೆಶರಧಿಽದರುತಿರೆಸರಿದಾವುಪರ್ವತವೆಲ್ಲಾ ॥೩॥ ಸುರಲೋಕವೆಲ್ಲಾವುಭರವಸವಿಲ್ಲಾದೆ । ಸರಕುಮಾಡಿದರಾಗ ॥ ೪ । ಲೋಕಕ್ಕೆಪ್ರಳಯಕಾಲವುಬಂದಿತಾವಾಗ । ಜೋಕೆಯಿಂಬೆಟ್ಟಾಶೇರಿದರೂ ॥೫॥ ಇಂತುತಲ್ಲಣಿಸುತ್ತಯಿರಲೂಅಶಬ್ದಕ್ಕೆ । ಕಂತುರೂಪನುಬ್ಯಾಂಟೆಹೊರಟಾ ॥೬॥ ತನ್ನ ಸತಿಯಸುತರನ್ಯಕಾರಕೊಂಡು । ಸೂರ್ಯಚಂದ್ರನುಪ್ರೋಲ್ವರಥದಿ ॥೭॥ ಕುಳಿತುಆನಳರಾಜನಳಿನಾಕ್ಷಿದಮಯಂತಿಬಾಲಕನುತರೊಡಗೊಂಡು ॥೮॥ ಮತ್ತೆರಾಜಾದಿರಾಜರುಯೆಲ್ಲಸಹವಾಗಿ । ಜೊತೆಗೂಡಿಹೊರಟಾರುಬ್ಯಾಂಟೆ ಕಾರರುಯೆಲ್ಲಾಬಿಲ್ಲಬಾಣವತೆಗೆದು । ಚಲ್ವಕುಲಾಪಿಯುಯಿಟ್ಟು ॥ ಕೆಲವಾರುದಟ್ಟಿಚಲ್ಲಣಕಟ್ಟಿದಾರಾಗ । ಬಲ್ಯೆಯಿ ಠಾಟಿಗಳನಾಪಿಡಿದು ॥ ಪಂದೀಯಬಲೆಗಳುನೂರಿಯುನಾನಾಬಗೆ । ಚಂದದಬಲೆಗಳುಪಿಡಿದೂ ॥೧೨॥ ಬಂದರುಬಲುಮನೆಗಾರನಾಯಿಗಳಾ । ಚಂದದಿಂಸರಪಣಿಕಟ್ಟಿ ॥೧೩॥ ಪಿಡಿದುನಾಯಿಗಳನ್ನುವಡಗೊಂಡುಬಂದಾರು । ತಡೆಯಾದೆಅಡವಿಗೆಬೇಗಾ ॥ ೧೪ ॥ ಕೋವಿದಜನರೆಲ್ಲಾಠೀವಿಯಿಂಹೊರಟಾರು । ಸರ್ವಜನರುಸಹವಾಗಿ ॥೧೫॥

ವ ॥ ಇಂತು ನಳರಾಜನು ತನ್ನ ಸತಿಸುತರು ಮಂತ್ರಿಸಹವಾಗಿ ರಥದೊಳು ಕುಳಿತುಕೊಂಡು ನಾನಾಬಗೆ ವಾದ್ಯದಿಂದ ಸೂರ್ಯನು

ತಲ್ಲಣಿಸುವಂತೆ ನಡೆತಂದು ಮುಂದೆ ಬೇಂಟೆಕಾರರುಂ ಅವರವರ ಸ
ತಿಯರು ಸಹಾ ಬಂದ್ಮನಳರಾಜನ ಕೊಡೆ ಅವರ ಸಾಮರ್ಥ್ಯಗಳಂ
ಹೇಳುತ್ತಿರ್ದಾರದಂತೆನೆ.

ಏಕತಾಳೆ ॥ ದೇವಾರನೀವಿನ್ನು ಲಾಲಿಸಿಕೇಳ್ವುದು । ಪೇಳ್ವೆವುನಂ
ಮಸಾಮರ್ಥ್ಯಗಳಾನೂ ॥೧॥ ಪುಲಿಸಿಂಹಶಾರ್ದೂಲಹೊಯ್ದೂಕೆ
ಡಹೂವೆನಾನೂ । ಹಂದಿಗಳಾದರುಕೊಂದುಬಿಡುವೇವೂ ॥೨॥ ಗಂ
ಡಭೇರುಂಡನತುಂಡಾಗಿಕಡಿವೆವೂ । ಮಂಡಲದೊಳಾರುವಮೃಗಗಾ
ಳನ್ನೆಲ್ಲಾ ॥೩॥ ಪಕ್ಷಿಗಳೆಲ್ಲಾವಯಿರಾಕ್ಷಣಹಿಡಿತಂದೂ । ಲಕ್ಷಶಂಕೆಗಳ
ನ್ನುಯಿಷೇಸುಘೋರಯೆ ॥೪॥ ಇಂತೆಂದುಹೇಳುತ್ತತಮ್ಮಪ್ರತಾಪವ ॥
ಪಂಥನೋಳ್ಪೋಗುತಾಯಿದ್ದರಾಜನರೂ ॥೫॥ ಸಾಗಿಬಂದಾರುಜನ
ರುಘೋರಅರಣ್ಯಕೆ । ಬೇಗದಿಂಬಂದಾರುಬೆಡಗಿನಾಜನರೂ ॥೬॥ ಅ
ಲ್ಲಿಇರುವವೃಕ್ಷಯೆಲ್ಲವಹೇಳುವೆ । ವುಲ್ಲಾಸದಿಂಕೇಳಿವೂರ್ವಿಯಾಜನ
ರೂ। ಸುರಹೊನ್ನೆಸಂಪಿಗೆಪರಿಮಳಶ್ರೀಗಂಧ। ಮೆಗವಹಾದಾರಿಮರವು
ಪರಿಪರಿಯಿಂದಾ ॥೮॥ ಅಲದಮರಗಳುಬ್ಯಾಲಾದಮರಗಳು ॥ ಮೋಲಾ
ದದಾಳಂಬರೀಲೆಯಿಂದಿರಲೂ॥೯॥ ಅತ್ತಿಯುಮರಗಳುಕಿತ್ತಲೆಮರಗ
ಳುಮೇಲಾದಮಾವಿನಲೀಲೆಯಿಂದಿರಲೂ ॥೧೦॥ ಹೊನ್ನೆಯುಮರಗಳು
ಚಂದನವೃಕ್ಷವೂ। ಬನ್ನಿಚನ್ನಂಗಿಯುಸೊಂಪಿನಿಂದಿರಲೂ॥ಇಂತಪ್ಪ
ವೃಕ್ಷದೆಡೆಯೊಳುತಾನೂ । ಸ್ವಂತದಿಂಪೊದೆಗಳುಸುತ್ತುಮುತ್ತಿರ
ಲೂಸೂರ್ಯನಪ್ರಭೆಗಿನ್ನುಶೇರದೆಇರುವಂತೆ । ಘೋರಅರಣ್ಯಾವಶೋ
ರಿದಾಘೋರಯು.. ॥

ವ॥ ಇಂತು ಅಡವಿಯೊಳು ಬ್ರಹ್ಮಾಡವಾಗಿರುವಂಥಾ ಮೃಗ
ಪಕ್ಷಿಗಳಂಕಂಡು ನಳರಾಜನು ಬ್ಯಾಂಟೆಯುಂನಾಡಲು ಅಪ್ಪಣೆಯುಂ
ಕೊಡಲು ಅವರು ಬೇಂಟೆಯನ್ನಾಡುವ ವಿಸ್ತಾರವಂ ಪೇಳ್ವೆನದೆಂ
ತೆನೆ. ರಾಗ ॥ ನನ್ನನಾನಾನಾನಾನನ್ನಾನ ॥ಪ॥ ಬ್ಯಾಂಟೆಗಾರ
ರೆಲ್ಲಾತಾವೂ । ನಿಂಟಿನಿಂದಾಬಳಲಿಬಂದೂ ॥೧॥ ಕಂಡವಾಗಾವ್ಮೃ
ಗಗಾಳೆಲ್ಲಾದಿಂಡುಗೆಡೆದೂಪೋಗುತಿರಲೂ ॥೨॥ ಹಂದಿಪುಲಿಕರಡಿ
ಗಳನು । ಕೊಂದಾರುಪಂದಾಬಿನಿಂದಾ ॥೩॥ ಸಿಮ್ಮಶಾರ್ದೂಲಗಳ

ನೊ । ಸಮ್ಮತಾವಿಕೊಂಡರಾಗ॥೪॥ ಭಲ್ಯಗಾಳಾತಾವುಪಿಡಿದು । ಯ ಲ್ಲಾಮೃಗವೂಕೆಡಿಹಿದಾರೂ ॥೫॥ ಬಲೆಗಳನ್ನುಬಿಟ್ಟುತಾವು । ಹಲ ವುಮೃಗವಾಕೊಂದರಾಗ ॥೬॥ ನಾಯಿಗಳಬಿಟ್ಟುತಾವು । ಹಲವು ಮೃಗವಾಕೊಂದರಾಗ ॥೭॥ ಮರಿಗಳಿಗೆಮರೆಯಾಗಿನ್ನು । ತೊರ ಯುದಿರ್ದುದಪ್ರಾಣವನ್ನೂ ॥೮॥ ಪಕ್ಷಿಜಾತಿಮೃಗಗಾಳನ್ನು । ಆ ಕ್ಷಣದೀಕೊಂದರಾಗ ॥೯॥ ಕೆಲವುಪಕ್ಷಿಗಳಿಂದಕೆಲವು । ಪಕ್ಷಿಪುರುಷಾ ರಿಂದಾಅಳಿದೂ ॥೧೦॥ ಪಕ್ಷಿಜಾತಿಕೂಗುವಂತೆ । ಕೂಗಿನಿಂದಾಕರಗಿ ತಾವೂ ॥೧೧॥ ಬೇಗಯೆಲ್ಲಾಪಕ್ಷಿಯನ್ನು । ಆಗತಾವೂಪಿಡಿವರಾ ಗಾ ॥೧೨॥ ಯೆಲ್ಲಪಕ್ಷಿಯನ್ನುಪಿಡಿದು । ಸಲ್ಲರಿತಾದಿಂದಾಬಂದೂ ॥ ಯಂತುಯೆಲ್ಲಾಮೃಗವುನೋಡಿ । ಸಂತೋಷದಿಂಧೊರೆಯುಆಗಾ ತನ್ನಕಾಂತನುತರೀಗಿನ್ನೂ । ಕಂತುರೂಪತೋರಿದಾನು ॥೧೫॥ ಬ್ಯಾಂ ಟೆಕಾರರಿಗೆಯೆಲ್ಲಾವುಡುಗೆರೆಯಮಾಡಿಸಿದಾನೂ ॥೧೬॥

ವ ॥ಇಂತು ಮೃಗಪಕ್ಷಿಗಳನ್ನು ದಮಯಂತಿಗೆ ತೋರಿಸಿ ತನ್ನ ಪರಿವಾರಸಹಿತವಾಗಿ ಅಲ್ಲಿಬಂದು ಸರಸಿಯಂಕಂಡು ವುದಕಕ್ಕೆಪೋ ಗುತ್ತಿರಲು ಅದರ ವಿಸ್ತಾರವಂ ಪೇಳ್ವನದೆಂತೆಂದೊಡೆ ॥

ಅಟತಾಳ-ಅರ್ಧರೇಕು ॥ ಮಂದಿಮಾರ್ಬಲಸಹಿತಾ । ಚಂದದಿಂ ಹೊರಟಾಹೇಮಾದಮೃಗಗಳೂಹಕ್ಷಿಮದಾಗಿಳಿಯಾ ॥೨॥ ಗೊರ ವಂಕೆಪಕ್ಷಿಗಳೂ ಕರಿಯಾಪಕ್ಷಿಗಳೂ ॥೩॥ ತಾವರೆಕವಲಗಳು ಠೀವಿ ಯಿಂದಿರಲೂ ॥೪॥ ವಿಸ್ತೀರ್ಣವಾಗಿರುವಕೊಳಕೆತಾಬಂದೂ ॥೫॥ ಪಾ ಳ್ಯವಬಿಡಿಸಿದಬಲವದೆಲ್ಲವನು ॥೬॥ ಅಲ್ಲಿರ್ಪರಿಗೆವಂದುಚಲ್ವಗುಡಾರ ಹಾಕಿಸಿದಾನಿನ್ನುಅದರೊಳಗೆಲ್ಲಾ ॥೮॥ ಚಿಗುರೆಲೆಗಳತಂದುಹಾಸಿ ಗೆಮಾಡಿ ॥೯॥ ತನ್ನಸತಿಯಾಸುತರುತಾವೂಪವಡಿಸಲೂ ॥೧೦॥ ।

ವ ॥ಇಂತು ದಮಯಂತಿಯು ತೋಳಿನಮ್ಯಾಲೆ ನಳರಾಜನು ಪ ವಡಿಸಿಕೊಂಡು ನಿದ್ರೈಸಿದು ಅಘೋರವಾದಂಥಾ ಸ್ವಪ್ನವಂಕಂಡು ಬೆದರಿಯೇಳಲು ದಮಯಂತಿತಾಕೆಂಡುಯೆದ್ದು ತನ್ನಪ್ರಾಣಕಾಂ ತನಿಗೆವುಪಚಾರಗಳಂಮಾಡುತಿದ್ದಾಳದೆಂತೆನೆ.

ಕಂ॥ ಭೂನಾಥಬೆದರಿಯೇಳಲು । ನಾನಾವುಪಚಾರಗಳನುಮಾನಿ

ನಿಮಾಡುತ । ತಾನುಅತಿಚಿಂತೆಯಿಂದಲಿ । ಮಾನಿನಿಮಣಿಕೇಳ್ದಳಾ
ಗಮಾನವಾಧೀಶನಾ ॥

ವ। ಇಂತೆಂದುಪಚರಿಸಿ ದಮಯಂತಿ ಇದೇನೆಂದುಕೇಳಲು ಆಕೆ
ಯಕೂಡೆ ತನ್ನ ಸಂಕಟಪೂರ್ವೋತ್ತರವಂ ಪೇಳುತ್ತಿರ್ದಾರದಂ
ತೆನೆ. ಪದಾ ॥ ಕೇಳೆಲೆದಮಯಂತಿನಾನೊಂದುಕನಸಾನುಕಂಡೆ
ಯಿಾಗನಮ್ಮರಾಜ್ಯವಬಿಟ್ಟುಪೋಗುವಂತಾ । ಕನಸುಕಂಡೆನಾನು
ಅಡವಿಯೊಳಗೆಶೇರಿಅಗಚಾಟ್ಟುಬೀಳುವಂಥಕನಸುಕಂಡೆ । ಬರಬಾ
ರದಕಷ್ಟಬರುವದಿನವುಗಿನ್ನುದಮಯಂತಿ ॥ ಕೊಂಡುಪೋಗುವ
ದೆನನ್ನಹಚ್ಚಡವನುಪಕ್ಷಿಬಂದು । ಕಾನನದೊಳುನಾವುಕಡುಕಷ್ಟ
ಬೀಳುವಕನಸುಕಂಡೆನೀನಿಷ್ಟ । ಸೀರೆಯುನಾವಿಬ್ಬರುಡುವಂಥಕನ
ಸುಕಂಡೆಅರಣ್ಯಅಡವಿಲಿ । ಹಾಳಚಾವಡಿಬಂದುಯಿರುವೊದಲ್ಲೆ ।
ಹಾಳುಚಾವಡಿಯೊಳಗೆನಾವಿಬ್ಬರಿರುವಂಥಕನಸುಕಂಡೆ । ಅಲ್ಲಿನಿನ
ಗೆವಂದುಮಾಯನಿದ್ರೆಯುಬರುವೊದಲ್ಲೆ । ಅಲ್ಲಿನಿನ್ನಬಿಟ್ಟುನಾನು
ಪೋಗುವಂತಾಕನಸುಕಂಡೆ। ದಾರಿಯುಪಥದೊಳುಘೋರಸರ್ಪವು
ಪೊಂದುಕಾಂಬೆನಲ್ಲೆ । ಅಂತಸರ್ಪನುನಾನುಚಿಂತೆಯಿಲ್ಲದೇಯೆತ್ತಿ
ಕೊಂಬೆ । ಅಂದುನನ್ನಕಚ್ಚಿೋದುವಿದಿವಶದಿಂದಮಯಂತಿ । ಆಗ
ಲೀಯನ್ನರೂಪುಅಳಿದು । ಪೋಪುದುಕೇಳುದಮಯಂತಿಮಾರೂ
ಪಿನೊಳೊಂದುಪಟ್ಟಣವಶೇರುವೆದಮಯಂತಿ । ರುತುಪರ್ಣನೆಂ
ಬೊಧ್ದೊರೆಗೆಬಾಣಸನಾಗಿಯಿರುವೆನೆಲೆ । ಅಂದಿಗೆಬಾಣಸನಾಗಿಹರು
ಷದಿಂದಿರುವಂಥಕನಸುಕಂಡೆ । ರುತುಪರ್ನನಬಳಿಯುಸಾರಥಿಯಾ
ಗುವೆದಮಯಂತಿ । ಹರಿಕೃಪೆಯಿಂದಾಲಿಹರಿಯೊದೀಕಷ್ಟವೂದಮ
ಯಂತಿತಿರಿಗಿ । ಧೊರೆತನವನ್ನುಮಾಡುವಂತಾಕನಸುಕಂಡೆನಾನು॥

ವ ॥ ಇಂತು ನಳರಾಜನು ಅಘೋರಸ್ವಪ್ನವನ್ನು ದಮಯಂತಿ
ಗೆ ಪೇಳಲು ದಮಯಂತಿ ತನ್ನಪತಿಗೆ ಧೈರ್ಯವಂ ಪೇಳುತಿರ್ದಾಳದಂ
ತೆನೆ. ಜಂಪೆ ॥ ಯಿಷ್ಟುಮಾತ್ರಕೆನೀವುಹೆದರುವರೆಯುಲೋಕಾಯು।
ಸೃಷ್ಟಿಯಜನಕೆಸುಖದುಃಖಗಳುಸುವೂ ॥೧॥ ಶಿರಿಯುಬಡತನವದ
ನ್ನುಯುರಡುದ್ವಂದಗಳಾಗಿ। ಧರಣಿಯಾಮ್ಯಾಲೆನಿರ್ಮಿಸಿಯಿನನು॥

ಬ್ರಹ್ಮಯೇನುಕೆಷ್ಟವುಬರಲಿತಾನುಧೈರ್ಯಬಿಡದೆ। ಜ್ಞಾನದಿಂದಿರು ತಿರಲೂತಾನೆಪ್ರೋಗುವದು ॥೩॥ ಸತ್ಯವೇಜಯವೆಂದುನಿತ್ಯಪೇಳು ತ್ತಿರಲು। ಕರ್ತೃಹರಿತಾನೀಗಕಡೆಹಾಯಿಸುವನೂ ॥೪॥ ಧೈರ್ಯವೇ ಸಂಪದವುಧೈರ್ಯವೇಸೌಭಾಗ್ಯ। ಧೈರ್ಯದಿಂದಲಿಧರಣಿಸಾಧ್ಯವಾಗು ವದು ॥೫॥ ಯೆಂದುಆಸತಿಪೇಳೆಅಂದುಮನಸನುಬಿಟ್ಟು। ಮಂದಿ ಮಾರ್ಬಲಸಹಿತಪಟ್ಟಣವನುಸೇರಿ ॥೬॥ ಅನಿತರೊಳುಶನಿಮಾಯದಿ ನದಿನಕೆತಾನಿನ್ನು। ಘನವಾಗಿಬರುತಿಹದುಜನಪತಿಗೆಆಗಾ ॥೭॥

ವ ॥ ಇಂತು ನಳರಾಜನು ಪಟ್ಟಣವಂಶೇರಿದ ತರುವಾಯದಲ್ಲು ಶನಿಮಾಯ ದಿನದಿನಕ್ಕೆ ಪ್ರಬಲವಾಗಲು ದಮಯಂತಿಯು ತನ್ನ ಪತಿಗೆ ಧೈರ್ಯವಂ ಪೇಳುತ್ತಿರ್ದಾಳದೆಂತೆನೆ.

ದ್ವಿಪದೆ ॥ ಕೇಳೈಯ್ಯಭೂಪತಿಯೆಕೇಳೆನ್ನಮಾತು। ಕೇಳೈಯ್ಯ ನಳರಾಜಚಂದ್ರನೀವು। ಧರ್ಮವನುಬಿಡಬ್ಯಾಡಿಯೆಂದುದಮಯಂ ತಿ। ಧರ್ಮಶಾಸ್ತ್ರವಪೇಳುತಿರಲುನಳಿನಾಕ್ಷಿ। ಧರ್ಮದಿಂರಾಜ್ಯವ ನಾಳುತ್ತಲಿರ್ದ। ಧರ್ಮವನುಬಿಡದೆಆಧರಣೀಶನಾಗ ॥ ಮಾಳವಪ ತಿಸಹಿತಮಗಧಪತಿಸಹಿತ। ಕಾಳಿಂಗಪತಿಸಹಿತಕಾಂಭೋಜಧೊರೆ ಯು। ಮತ್ತಿನ್ನುಯಿರುವಂತಮಂಡಲೇಶ್ವರರು। ಪ್ರಿಯಬಂಧುಗ ಳುಯಲ್ಲಪ್ರಿಯದಿಂದದೊರೆಗೆ। ಭಯಭಕ್ತಿಯಿಂದಲಿಸಕಲರುಕಾ ಯ್ದಿರಲೂ। ಧರ್ಮವಂಬಿಡದರಾಜ್ಯವನಾಳುತ್ತಿರ್ದಾ ॥

ವ ॥ ಇಂತು ನಳರಾಜನು ಧರ್ಮದಿಂದ ರಾಜ್ಯವಂನಾಳುತ್ತಿರಲು ಅನಿತರೊಳು ಶನಿರಾಜನು ಬಂದು ನಳರಾಜ್ಯನ ರಾಜ್ಯವಂ ಜೂಜ ವಂನಾಡಿಸಿ ಅರಣ್ಯವಂ ಶೇರಿಸಬೇಕೆಂದು ಯೋಚಿಸಿ ಪುಷ್ಕರನೆಂಬ ಧೊರೆಬಳಿಗೆ ಕಪಟಬ್ರಾಹ್ಮಣರೂಪು ತಾಳಿ ಬಂದನೆಂತೆನೆ.

ರಾಗಪದ ॥ ಶನಿರಾಜತಾನೆಬಂದನುಪುಷ್ಕರನಬಳಿಗೆ। ಶನಿರಾ ಜತಾನೆಬಂದಾನು ॥ ಪ ॥ ಶನಿರಾಜತಾಬಂದಘನಮಾಯದಿಂದಲಿ। ವಿನಯದಿಂಬ್ರಾಹ್ಮಣರೂಪುತಾಳಿಬೇಗಾ ॥ ೧ ॥ ತನ್ನನೋಡಿದಜನ ರುನಗುವಹಾಗೆ। ಚಿನ್ಮಯರೂಪುತಾಳಿಮನ್ನಕರಿನಾಸ್ವರ। ವುನ್ನ ತವಾಗಿನ್ನುಅನುಮಾನವಿಲ್ಲಾದೆಬಂದಚಂದಾದಿಂದಾ ॥ ೨ ॥ ಕಪ್ಪುಶ

ರೀರದಿಂದಾಲಿಕುರುಚುವಾದಕ್ರೂರಶಬ್ದಗಳಿಂದಾಲಿ । ಬಿಲ್ಲುಬಾಗಿದ ಕಾಲುಚಪ್ಪಿನರೂಪು ತಾಳಿಲೀಲೆಯಿಂದಲಿ ಬಂದಲೋಲಪುಷ್ಕರನಬಳಿಗೆ ॥೩॥ ನರೆತಾಗಡ್ಡಗಳಿಂದಾಲಿಆಶನಿರಾಜಮರಹೋದಲಜ್ಜನಂದ । ದೀಶರೀರಾದೊಳಿಹಹೊಟ್ಟೆ । ಭರದಿಬೆಳಸಿಕೊಂಡುಕರುಣದಿಂದಲಿ । ಬಂದಧೀರಪುಷ್ಕರನಬಳಿಗೆ ॥೪॥ ಬೊಕ್ಕಬಾಯಿಗಳಿಂದಲೀಬಾಯಿಂದಹೊರಗೆಬಂದಹಲ್ಲುಗಳಿಂದಾಲೀ । ಮುಕ್ಕುಮೂಗುಗಳಿಂದ ತಕ್ಕರೂಪನ್ನುತಾಳಿ । ಪೆಕ್ಕಸಪಿಲ್ಲದೆಹೊಕ್ಕುಪುಷ್ಕರನಬಳಿಗೆ ॥೫॥ ಮಾಸಿದಧೋತ್ರದಿಂದಲಿಆಶನಿರಾಜಪೂಸಿದಾಗಂಧದಿಂದಲೀ। ಬಾಸುರವಿಲ್ಲದೆಹಾಕಿದಜನಿವಾರ । ರೋಷದಿಂದಲಿಬಂದಆಪುಷ್ಕರನಬಳಿಗೆ ॥೬॥ ಯಿಂತುರೂಪನುತಾಳಿಆಶನಿರಾಜಪಂಥದಿಂದಲಿಬಂದನು ॥ ಕಂತುರೂಪನಾಸ್ವಂತವಾದಪುಷ್ಕರನಿಗೆ । ನಿಂತುಹರಿಕೆಂದುಕೊಟ್ಟಚಿಂತೆಯಬ್ಯಾಡೆಂದೂ ॥೭॥

ವ ॥ ಇಂತು ಶನಿರಾಜನು ಪುಷ್ಕರನಬಳಿಗೆ ಬಂದು ಹರಿಕೆಯಂ ಕೊಟ್ಟು ಯೇನೆನ್ನುತ್ತಿರ್ದಾನು ॥

ಜಂಪೆ ॥ ಭೂನಾಥನೀಕೇಳು ನಾನು ಸೂರ್ಯನಮಗನು । ಮಾನಿನೀಛಾಯಾದೇವಿಯುಯನ್ನಮಾತೆ॥೧॥ ಯಿಳೆಯೊಳಗೆಶನಿರಾಜನೆಂಬೊಪೆಸರೆನಗಿನ್ನು । ಸರಿಯಾದಜನರುಮೂಲೋಕದೊಳಗಿಲ್ಲಾ ॥೨ ಹರಿಹರಬ್ರಹ್ಮಾದಿಸುರರೆಲ್ಲರನುನಾನು । ಶರೀರವನುಹಿಡಿದುಬಾಧೆಯಗೊಳಿಸುವವನು ॥೩॥ ಯಿಗನಿನ್ನಯಬಳಿಗೆಬಂದುಕೆಲಸವು ಕುರಿತು ॥ ಸಾಗಿಬಂದೆನುಅದರಆಗಮವಕೇಳೂ ॥೪॥ ನಳಿನಾಕ್ಷಿದಮಯಂತಿಯುಬಸುವತಿಯುಪ್ರೋರ್ವಿ । ಖಳೆಯುಳ್ಳಯಿಂದುಮುಖಿಯಿಳಯೊಳಗೆಪುಟ್ಟಿಪುಟ್ಟಿದದಿನದಿಂದಬಟ್ಟಕುಚವಬಾಲೆ । ದಿಟ್ಟದಿಂಕಲ್ಯಾಣವಾಗಬೇಕೆಂದೂ॥೬॥ನಾನುಯಿರುತಲಿರೆಮತ್ತೆಮಾನಿನೀ ಮಣಿಯನ್ನು । ತಾನುಮದಿವಾದನಳರಾಜನೆಂಬುವನೂ ॥ ೭ ॥ ಮದುವೆತಾನಾಗಿನ್ನು ಮುದದಿಂದಮಕ್ಕಳನುಪಡದು ರಾಜ್ಯವನೆಲ್ಲನಡೆಗರದೊಳೀಗಾ ॥ ೮ ॥ ಆಳಂತಿರ್ದನುನಿನ್ನಮ್ಯಾಲೆದೃಷ್ಟಿಲ್ಲವೆ। ಕೇಳುನಾನೀಗೊಂದುಪೇಳ್ವೆಯೋಚನೆಯಾ ॥೯॥ ಜೂಜನಾಡಿಸಿಅವನ

ರಾಜ್ಯವೆಲ್ಲನಿನ್ನ । ಭೋಜನವನುಮಾಡುವೆನುವಾಜಿಯಿಾಮಾತು ॥ ಯಲ್ಲಕಾರ್ಯಕೆನಾನುನಿಲ್ಲದೇಯಿರುತಿಹೆನು । ವುಲ್ಲಾಸದಿಂನೀನುಇ ಲ್ಲಿಗೆಬಹುದು ॥೧೧॥

ವ ॥ ಇಂತುಶನೇಶ್ವರನು ಹೇಳಲು ಸಂತೋಷವಂಪಟ್ಟು ಶನಿ ರಾಜನಿಗೆ ಕರವಂಮುಗಿದು ಪುಷ್ಕರರಾಯನು ಯಿಂತೆಂದನು.

ಯಕೆತಾಳ ॥ ಕೇಳಿನಿಮ್ಮಯಮಾತುಮಿಾರುವಂತವನೆಲ್ಲಾ । ಕೆ ಳೆಯುಳ್ಳನಳರಾಜನಿರುವಲ್ಲಿಗೈದು ॥೧॥ ಜೂಜವನಾಡನೆಂದುವಾಚೆ ಯಿಂದಲಿಕರೆಯೆ । ಆರಾಜ್ಯಸತ್ಯವರಿಟ್ಟುಆಡುವೆನು ॥೨॥ ಜೂಜನಾ ಡುವನೆಲ್ಲಾವಣಜಡೆಹೇಳುವೆ । ವಾಜಿಯಮಾತಿದಕೆಪೂಜ್ಯನೆಕೇ ಳು ॥೩॥ ಅದಕಿನ್ನುಶನಿರಾಜಮುದದಿಂದತಾನುಡಿದ । ಅವನಕ್ಮದ ಯದಿನಿಂತುಮನೆಸುಪುಟ್ಟಿಸುವೆ ॥೪॥ ಜೂಜನಾಡುವಬುದ್ದಿನಾನು ಪುಟ್ಟಿಸುನೆನು । ವಾಜಿಯಿಂದಲೀಅವನರಾಜ್ಯವಕೊಡುವೆ ॥೫॥ ವಂ ದಕ್ಕುನಿನಗಿನ್ನುಸಂದೇಹಬ್ಯಾಡೆಂದು । ಬಂದದಿಂಪೇಳಿತಾನಾದೃ ಶ್ಯವಾಗೆ ॥೬॥

ವ॥ ಇಂತೆಂದುಪುಷ್ಕರನಿಗೆ ಶನೇಶ್ವರನು ಪೇಳಿ ಅದೃಶ್ಯವಾಗಲು ಇಲ್ಲಿ ನಳರಾಜನ ವಿಸ್ತಾರವಂ ಪೇಳ್ವೆನದೆಂತೆನೆ.

ಯಕೆತಾಳ ॥ ಅನಿತರೊಳ್ ನಳರಾಜತಾನಾಗ । ಹರುಷದಿಕನ ಕದರತ್ನಸಿಹ್ಮಾಸನಕೆಬಂದೂ ॥೧॥ ಮಂತ್ರಿಪ್ರಧಾನೆಯರಾಗಸ್ವಂ ತಾದಕಾಲಾಳು । ಸಂತೋಷದಿಂಲಾಲಿಓಲೈಸುತಿರಲೂ ॥೨॥ ವೇಶಿಯ ಜನಗಾಳುಹಾಸ್ಯದಾಜನಗಾಳು । ಭೂಸುರರುತಾವೆಲ್ಲಲೇಸಾಗಿಬರ ಲೂ ॥೩॥ ಸಂಗೀತಸಾಹಿತ್ಯಮಂಗಳಾಕಾರಕರು । ಶೃಂಗಾರವಂತಾ ವುಶೇರಿವಾಕ್ಯಿಸೆಯಿಂತುದೇವೇಂದ್ರನವಾಲಗದಂದಾದಿ ॥ ಕಂತುರೂ ಪಾನುಯಿರುವಸಮಯದೊಳಾಗಾ ॥೪॥

ವ ॥ ಇಂತಪ್ಪ ವಾಲಗದೊಳು ನಳರಾಜನು ಇರುವ ಸಮಯ ದೊಳುಪುಷ್ಕರನು ಬಂದನದೆಂತೆನೆ.

ಸಾಂಗತ್ಯ ॥ ಜನನಾಥಕೇಳ್ಪುಷ್ಕರರಾಜನೆಂಬುವ । ಮಂತ್ರಿ ಮಂದಿಯುಮಾರ್ಬಲದಿ ॥ ೧ ॥ ಘನದಿಂದಬಂದಪುಷ್ಕರನವಾರ್ತೆ

ಯಕೇಳಿ । ಮನದಿಸಂತೋಷವತಾಳಿ ॥೨॥ಬರಹೇಳೆಂಬಂದಾಗಚರ ರನ್ನುಕಳುಹಿಸಿಹರುಷಾದಿಬಂದಪುಷ್ಕರನು ॥೩॥ ವಿನಯದಿಂದಲಿಬಂದುಕಿಮಹಾರಾಜನಿಗೆ । ಘನದಿಂದಕರಗಳಮುಗಿದು ॥೪॥ ಪರಿಣಾಮವೇಯೆಂದುಹಾರ್ಥಿಸಿವೇಂದ್ರನುಕೇಳಿ । ಹರಿಕೃಪೆಯಿಂದಶುಭವೆಂದಾ ॥೫॥ ಮನುಜಾಧಿನಾಯಕನುತ್ತೆನಿಮಗೆ । ಶುಭಯೆಂದುಪುಷ್ಕರನತಾಕೇಳಿ ॥೬॥ ನಿಮ್ಮದಯದಿಶುಭವಲ್ಲದೇಮತ್ತಿನ್ನುಯಿನ್ನುನಮಗೆಭಯವಿಲ್ಲಾ ॥೭॥ ಯೆಂದುನಳರಾಜಾನುಚಂದದಿನ್ನು ಇಂದುನೀಬಂದುದೊಯೇನು ॥೮॥ ಯೆಂದುಬಂದವನಲ್ಲಯಿಂದುನೀಬಂದಂಥ ॥ ಚಂದವಾಪೇಳೆಂದುಕೇಳೆ ॥೯॥ ಯೆಂದಮಾತನುಕೇಳಿಚಂದದಿಂಪುಷ್ಕರನು । ಯಿನವಂಶಚಂದ್ರನೆನಿಮ್ಮ ॥೧೦॥ ನೋಡಿಪ್ಪೋಗುವೆನೆಂದುಗಾಢದಿಂದಲಿಬಂದೆ । ಬೇಡುವೆಕೇಳೆ ಒಂದುಮಾತು ॥ ವಿನಯದಿಂದಲಿನಾವುಇಬ್ಬರುಪಗಡೆಯು । ವಂದುಆಟವುಆಡಬೇಕೊ ॥೧೧॥ ವ ॥ ಇಂತೆಂದ ಪುಷ್ಕರನಮಾತಿಗೆ ನಳರಾಜನೇನೆನ್ನುತಿರ್ದಾನೊ.

ಜಂಪೆ ॥ ಇಂತುಪುಷ್ಕರಕೇಳಿಚಿಂತೆಯಿಂನೃಪತಿ । ಪಂಥವಲ್ಲವುನರರುಪಗಡೆಯಾಡುವದು ॥೧॥ ಸಕಲಸಂಪದವೆಲ್ಲಸರಿದುಪೋಪುದುಯಿನ್ನು । ಸುಖವೆಲ್ಲಪೋಗಿಕಷ್ಟಬರುವದೆಂದಾ ॥೨॥ ಯೆಂದುಧೊರೆಪೇಳುತಿರೆಅದಾಗ ಶನಿರಾಯುಬಂದುಹೃದಯದಿನಿಂತುಮನಸುಪುಟ್ಟಿಬರಾ ॥೩॥ ಪಗಡೆಯಾಡುವೆನೆಂದುಸಡಗರದಿನಾಬರಲು । ಪೊಡವಿಪತಿನಿನ್ನ ಸನ್ಮಾನವನೆಮಾಡುವದು ॥೪॥ ನ್ಯಾಯವಿಲ್ಲವುಕೇಳುದಯವಿಟ್ಟುಯನ್ನಮೇಲೆ । ವಿನಯದಿಂದಾಡುವದುಬಹುಲೇಸುನಿಮಗೆ ॥೫॥ ಯೆಂದವಮಾತನುಕೇಳಿಚಂದದಿಂನಳರಾಜ । ಅಂದುತರಿಸಿದಸಾಚಿಕೆಯುಪಗಡೆಸಾಲ ॥೬॥ಯೆಂದಿನ್ನುತಾನಾಗಚಂದದಿಂಸಾರಿಗಳ ಅಂದವಿನಾಲ್ಕುಜಾತಿಯಕಾಯಿತರಿಸೀ ॥೭॥ ವ ॥ ಈಪ್ರಕಾರದಿಂದ ಪಗಡೆಸಾಚಿಕೆ ಸಾರಿಗಳು ತರಿಸಿ ನಳರಾಜನು ಪುಷ್ಕರರಾಜನು ಪಗಡೆಯಾಡುವ ವಿಸ್ತಾರವಂ ಪೇಳ್ವೆನದೆಂತೆನೆ.

ಪಗಡೆಯಾಡುವಪದಾ ॥ ಪಟ್ಟವರಸೂನಳರಾಜನು । ದಿಟ್ಟದಿಂ

ದಪುಷ್ಕರನುಪಗಡೆಯಾಡುತಿರ್ದಾರೊ ॥೫॥ ಪಟ್ಟದರಸನೆಳರಾಜ
ನೆದಿಟ್ಟತನದಿನೀನಾಡುವೊಮೊಟ್ಟ । ಮೊದಲೂಕಾಯಿತೆರಿಸಿ ಘಟ್ಟ
ಯಾಗಿಕುಳಿತುಕೊಂಡರು ॥೧॥ ಯೆಂದಮಾತನುಕೇಳಿಆನಂದದಿಂ
ದನೆಳರಾಜನು ॥ ಅಂದುಕೆಂಪು ಕರಿದು ಹಳದಿ ಹಸುರು ಚಂದದಿತರಿ
ಸಿ ॥ಪಗಡೆ॥ ೨ ॥ ದಾಯವನ್ನು ಆಡುತ್ತ ಮಾಯದಿಂದಶನಿಯುಬಂ
ದುದಾಯದೊಳಗೆನಿಂದಾನೆಂಬೊ ॥ ಪಗಡೆಯಾ ॥ಪಂದ್ಯವೇನು ಎ
ನುತಲಾಗಾಅಂದುರಾಯಕೇಳಲು । ಚಂದದಿಂದಪುಷ್ಕರನೊವಂದು
ಮಾತಾನಾಡಿತಾನೊ ॥೪॥ ನೀನುಯಿನ್ನುಸೋತಾರೆನಿನ್ನರಾಜ್ಯವ
ನೆಗೆಕೊಡಿಸು । ನಾನುಸೋತರೆನನ್ನ ಹೆಮೆನಿನಗೆಕೊಡುವೆನೆಂಬೊ॥
ದುಗವುಭಾರಾಯನುತಾಲಾಗಾ । ಸೊಗಸಿನಿಂದಾತಾವಿಬ್ಬರೊ । ಮಿ
ಗಿಲುಮಿಗಿಲುರೋಷಾದಿಂದಾ । ಸುಗುಣಾರುತಾವುಕುಳಿತುಕೊಂಡು॥
ಯಿಂತುತಾವುಆಡುತಿರಲೂ । ಚಿಂತೆಯಿಲ್ಲದೀರ್ಪಾರು । ಪಂಥದಿಂ
ದಾಶನಿಯೂಬಂದುಪಗಡೆಯೊಳಗೆನಿಂತಾನೆಂಬೊ ॥ ೭ ॥ ಯೇನು
ದಾಯವಡ್ಡಾಳಿನ್ನು । ತನಗೆದಾಯಬೀಳಾದಿರಲೂ । ಮಾನವಾಧೀಶ
ನುಮತ್ತೆಕೋಪಕೆಚ್ಚಿ ಚಿಂತೆಯಿಂದಾ ॥ ೮ ॥ ಅನೇಕುದುರೆದವಸಧಾ
ನ್ಯೆ । ಹೊನ್ನುಭಂಗಾರಗಳನು । ಯಿರುವವಡವೆವಸ್ತುತಾನುಯೆಲ್ಲ
ಸೋತನೆಂಬೊ ॥೯॥ ಕುದುರೆಗಳತಾನೋಡಿ । ಚದುರೆಯಾರಾಸೋ
ತನಾಗ । ಮುದದಿಮೊತ್ತಾನೋಡಿತಾನು । ಅದನುಯೆಲ್ಲಾಸೋತ
ನೆಂಬೊ ॥೧೦॥ ನವರತ್ನಗಳನೋಡಿತಾನೊ । ಜವಳದಾಣ್ಯವನೋ
ಡಿಯಿನ್ನುಮತ್ತೆಧಾನ್ಯವನೆಲ್ಲ । ಅವನಿಪತಿಯುಸೋತನೆಂಬೊ ॥
ಮತ್ತೆರಥವಾನೋಡಿತಾನೊಚತ್ರಚಾಮರವನೋಡಿ । ಮುತ್ತುರ
ತ್ನಪವಳಾರ್ನಗಳನು । ಮತ್ತೆಯಿನ್ನುಸೋತನೆಂಬೊ ॥೧೨॥ ಕಾಮಿ
ನಿಯರಸೋತನಾಗಹೆಮೆಯೆಲ್ಲಾಸೋತಾನೊ । ಅವಹಾಧ್ಯಾನವ
ಕೇಣಜಭೂಸತಿಯೊಸೋತನೆಂಬೊ ॥೧೩॥ ರತ್ನಕೊಡೆಯುಸೋತ
ತಾನೊಸತ್ಯವುಳ್ಳನೆಳರಾಜಾನೊ । ಮತ್ತೆಯಿರುವದ್ರವ್ಯವನ್ನುಯು
ಕ್ತಿಯಿಂದಾಸೋತನೆಂಬೊ ॥೧೪॥

ವ ॥ ಇಂತು ನೆಳರಾಜನು ಪಗಡೆಯನ್ನಾಡಿ ಸಕಲಸಂಪದವಂ

ಸೋಲುತ್ತಿರಲು ಮಂತ್ರಿಯು ಚಿಂತೆಪಟ್ಟು ವಿನಯವಚನದಿಂದ ನಳರಾಜನಕೂಡೆ ಯೇನೆನ್ನುತಿರ್ದಾನೊ.

ಜಂಪೆ ॥ ವಸುಧೀಶನೀನಿಂತುಪಶಿವೃತ್ಪೃಷಿಗಳಮರತು । ವಿಷಯದಲಿಜೂಜನಾಡುವರೆ ನೀವೆಂದಾ ॥೧॥ ಸುದತಿಯರುನಿಮ್ಮನುಜಲಕೆಪನುಮಾಡುವರೆ । ಕೆರೆಯುಬಂದವರೀಗನರನಾಥಚಂದ್ರ ॥೨॥ ಇದುವ್ಯಾಳ್ಯವಲ್ಲನ್ಯೆಸನುಮತದಿಆಡುವದು । ಅನ್ನನೀರನುಬಿಟ್ಟುಆಡುವರೆನೀನೊ ॥೩॥ ಯಿಾಗಆಟವನಿಲಿಸಿಯಿದುವ್ಯಾಳ್ಯೆವಲ್ಲೆಂದು । ಬೇಗದಿಂದಲಿಮಂತ್ರಿಕೈಪಿಡಿದುಯಿತ್ತೆ ॥೪॥ ಆದಕೆಆನಳರಾಜವಿದಗೆಮಂತ್ರಿಯುಮೇಲೆ । ಗದರಿಸಿಕ್ರುಗಳೆತೆರದಿಕಣ್ಣುಗಳುಬಿಟ್ಟು ॥೫॥ ನಿನಗ್ಯಾಕೆಯಿಾಮಾತುನಿನ್ನಕರೆದವರ್ಯ್ಯಾರು । ಬಿಡುಯನ್ನಕೈಯ್ಯಯನುತಘರ್ಜಿಸಿದಾನೊ ॥ ೬ ॥ ಮತ್ತೆಜೂಜಕೆತಾನುಮನವಿಟ್ಟುಕುಳಿತಿರಲು । ಘನಚಿಂತೆಯನುತಾಳಿಮಂತ್ರಿಯುತನ್ನಮನದಿ॥೭॥ ಯಿಂತುಜೂಜಾಡುವನೇನುಕಾವುಯುಂದ । ಯಿಂತುಹೇಳಿದಮಂತ್ರಿವಿನಯದಿಂತಾನೊ ॥ ೮ ॥ ಯಂದುಚಿಂತೆಯತಾಳಿಚಂಡದಿಂದಲಿಮಂತ್ರಿ । ಬಂದನಾದಮಯಂತಿಯೊಡನೆಹೇಳುವರೆ ॥೯॥

ವ ॥ ಇಂತು ಮಂತ್ರೀಶ್ವರನು ದಮಯಂತಿಯ ಬಳಿಗೆ ಬಂದು ಮತ್ತೇನೆನ್ನುತಿರ್ದಾನೊ.

ಕಂದ ॥ ದಮಯಂತಿಹೇಳುನಿಮ್ಮಯರಮಣನು । ನಳರಾಜಚಂದ್ರರಾಜೇಂದ್ರನೀಗುಂಬಹುವಿಧದಿನಾನುಹೇಳಿದೆ । ಕೇಳದೆಬಹುಕೋಪದಿಂದಘರ್ಜಿಸಿನುಡಿದನೊ ॥

ವ ॥ ಇಂತುಮಂತ್ರಿಹೇಳಿದ ಮಾತುಗಳಂ ಕೇಳಿ .ದಮಯಂತಿ ತಾನೆದ್ದುಬಂದು ನಳರಾಜನಂನೋಡಿ ಯೇನೆನ್ನುತ್ತಿರ್ದಾಳು.

ಯಕತಾಳ ॥ ಇದುಯೇನುಭೂಪಾಲ ಯಿಂತಕೆಲಸವುನಿಮಗೆ । ಮಂತ್ರಿಯುಮಾತನ್ನು ಮಿಾರಲುಬಹುದೆ ॥೧॥ ಮಂತ್ರಿಯುಮಾತನುಮಿಾರಿಆಡುವರೆಭೂಪಾಲತಂತ್ರವಿದೀಗಲೂ ದೈವವಶಾಯುಗಳೊ ॥ ಯಿನ್ನುಅನುಮಾನವ್ಯಾಕೆ ಯಿದುಮೊದಲಾಗಿಯು । ಯಿನ್ನೇನುಕಷ್ಟವು ನಮಿಗೆಬರುವ್ರೋದೊ ॥೩॥ ದುಸ್ವಪ್ನಫಲಗಳು ತಪ್ಪೋದಕೇ

ಳಿನ್ನೂ । ವಪ್ಪದಿಂಬ್ರಹ್ಮನುಬರದಮತಾನಿರಲೂ ॥೪॥ ಪೂರ್ವಕೃತ್ಯ ವುವಿಸಾರಲಾರಿಗೇಳಿಳವಲ್ಲ । ಯಿಸಾತೇಳುಲೋಕದೊಳಗೆಂದಳಾದೇವಿ ॥೫॥ ಯೆಂದುಹೇಳಲುಸತಿಕೇಳದಿರಲೂಅರಸು ॥ ಚಂದದಿಂಮನದೊಳಗೆ ತಾನೊಂದುನೆನೆದು ಪ್ರಶ್ನೆಹನೆಂಬುವತನ್ನ ಸಾರಥಿಯನ್ನಕರೆದು ತನ್ನವೃತ್ತಾಂತವೆಲ್ಲವಂಪೇಳಿ ॥೭॥ ಕೇಳೈಯ್ಯ ಪ್ರಾಶ್ನೇಯಕೆಳೆ ಯುಳ್ಳಮಕ್ಕಳ । ಕರಕೊಂಡುಪ್ರೋಗಿವಿದರ್ಭಪುರದೊಳಗೆ ॥೮॥ ಯನ್ನಪಿತನುಭೀಮರಾಯನಬಳಿಯಲ್ಲಿ । ಯಿರಶಿಯನ್ನಯವಿವರ ವೆಲ್ಲವಹೇಳಿ ॥೯॥ ಯಿಸಾಗಾಲೆಬಾರೆಂದುಬೇಗಾದಿಪ್ರಶ್ನೆಹನಾನು । ಅ ಗಮಕ್ಕಳಕರದುರಥದೊಳಗೆಕುಳ್ಳಿರಿಸಿ ॥

ವ॥ ಇಂತುಪ್ರಶ್ನೇಹನು ಮಕ್ಕಳು ರಥದೊಳಗೆ ಕುಳ್ಳಿರಿಸಿ ಕೊಂಡುವಿದರ್ಭಾಪುರಿಗೆ ಹೋಗಲು ಅಪುರದಾಜನರೂ ಪರಿಜನರು ಏನೆನ್ನುತ್ತಿರ್ದಾರೂ.

ಯಾಲಪದ ॥ ಆಗಾಪುರದಾಜನರೂಯೆಲ್ಲಾ । ನಗೆಮುಖದಪು ತ್ರಾರನೋಡಿ । ಬೇಗಯೆಲ್ಲಾವಾತನಾಡಿದರೂ । ನಾವಿನ್ನುಪ್ರೋ ಗಿಯಿಸಾಗಧೊರೆಗೆಹೋಗಿಹೇಳಬೇಕೆಂದೂ ॥೧॥ ಆಕ್ಕಾರಿಂದಾನೋಡೀ ತಾವೂ । ಸೊಕ್ಕುಜವ್ವಾನೇಯಾರೆಲ್ಲಾ ಮಂಕುಮರುಳೂಆಗಿನೋ ಡುವರೆ । ಆ ಪುರದಾಜನರೂ । ಕೋಟಿಚಂದ್ರನಪ್ರೋಲ್ವಪುತ್ರಾರಾ ಯಿಂತೂಯೆಲ್ಲಾರುನೋಡುತಿರ್ದಾರು । ಅನಿತಾರೊಳಗೆ ಪ್ರಶ್ನೇ ಯಾನೂ ॥ ಅಕ್ಕರಿಂದಾಕರದೊಪ್ಪೈದಾನೂ ಭೀಮರಾಯನಬಳಿಗೆ । ಬಂದುಕರವಾಮುಗಿದಾನು॥

ಕಂದ ॥ ಕೇಳೈಯ್ಯಭೀಮರಾಯನೆ । ಯಿಳೆಯೊಳಗೆನಳರಾಜತಾ ನುವುಪರರಾಜರಿಗೆ ॥ ಪಂಥದಪಗಡೆಯನಾಡುತ । ಸ್ವಂತದಅರಮ ನೆಯೊಳಿರ್ದಸಕಲಾಭರಣವಾ ॥೧॥ ಸೋತನುಪುಷ್ಕರರಾಯಗೆ । ಅ ತಿಹಿತದೊಳುಯನ್ನಕರದುಸುತರನುಬೇಗದಿ । ರಥದೊಳುಪ್ರೋಪು ದುಯೆಂದನು । ಅತಿಶಯದಿಂಬಂದನಾನುಪುತ್ರರನೋಡಿ ॥

ವ ॥ ಇಂತು ಪ್ರಶ್ನೇಹನು ಪುತ್ರರನೋಡಿ ಕುಳ್ಳಿರಿಯೆಂದು ಅಲ್ಲಿ ನ ವಿದ್ಯಮಾನವಂ ಪೇಳಿಬರುವ ಅನಿತರೊಳು ಯಿತ್ತ ನಳರಾಜನು

ಪಗಡೆಯಂನಾಡುತ್ತಿಗಲೂ ಪುರಜನರು ಪರಿಜನರು ಯೇನೆನ್ನುತಿ
ರ್ದಾರೂ. ಯರಾಬಪನ॥ ಆಗಾಪುರದ ರಾಜನರೆಂಯೆಲ್ಲಾ । ತಮ್ಮೊ
ಳುತ್ತಾವ್ ಚಿಂತೆಮಾಡಿ । ಬೇಗಯೆಲ್ಲಾ ಮಾತಾನಾಡಿದರೂ । ನಾವಿ
ನ್ನುಹೋಗಿ। ಯಿರಾಗಧೊರೆಗೆಹೇಳಬೇಕೆಂದೂ ॥೧॥ ಮಂತ್ರಿ ಮಾತಾ
ಕೇಳಾವನು। ನಮ್ಮಮಾತಾಕೇಳುವನೆ। ತಮ್ಮೊಳುತ್ತಾವ್ ಆಳಿದೂ
ನೋಡಿಂನೂ। ಬಿಡಬೇಕಲ್ಲ ನೆನಿಮ್ಮಮಾತೂಕೇಳಿಬಿಡುವಾನೆ ॥೨॥
ಪೋಪಲೂಜೂಜಾನಾಡುವಾಗ। ಬುದ್ಧಿ ನಿಮಗೆಸಾಲಾದೆಂದು। ಬು
ದ್ಧಿಮಾತಾಕೇಳಾಲಿಲ್ಲಾವೆ। ಆಧೊರೆಗೆಯಿನ್ನು ಸಧ್ಯನಮ್ಮಯಮಾ
ತುಕೇಳುವನೆ ॥೩॥ ಕರ್ಮ್ಮವಿನ್ನುಸಂಗ್ರಹಿಸಾಲೂ। ಬ್ರಹ್ಮನಾದಾರು
ಕೇಳೋದಿಲ್ಲಾ। ಸಮ್ಮತಾದೀಪೋಗೀನಾವಿನ್ನು। ಆನಳರಾಜಾಗೆ।
ಹೇಳಿನೋಡುವೆಯಿನ್ನೊಂದುಸಾರಿ ॥೪॥ ವಸಿಷ್ಠಮುನಿಯೂ। ಯಿಂ
ತಾಕಪಟರಾಜಪಾಡುವದು । ಭುವನದೊಳಗೆತಿಳಿಯಾಲಿಲ್ಲಾವು ।
ಯಿನ್ನಾರುದರು ತಿಳಿಮಬಂದಮುನಿಯು ಹೇಳ್ವಾರಕೇಳುವಾ ॥೫॥
ಯಿಂತೂರೆಲ್ಲಾ ಯೋಚನೆಮಾಡಿಸ್ವಂತಾದಿ । ನಳರಾಜನಕೊಡೆ
ಚಿಂತೆಯಿಂದಾಕರವಾಮುಗಿದಾರು । ಆಧೊರೆಗೆಯಿನ್ನೂತಂತ್ರದಿಂ
ದಾತಾವುರೆಳ್ವಾರು ॥೬॥ ಮಹಾತಾಪಾನಿಶನೇಕೇಳುನೀಜೂಜಾನಾಡು
ವಾದು। ಯೇನುಯುಮಗೆತೋಚಲಿಲ್ಲಾವು ಆನಳರಾಜಾಹಾನಿಯಿದ
ನೊಳು[illegible] ತನ್ನ ಮಾಲೆ ಬೀಳೋಕೆಲಸಾತಾನುಯಿನ್ನೂ
ಮಾಡಬಹುದೆ। ಯನ್ನುಲಾಗಾದೆಯಿರಾತೆರಡೊಳುಆಧೊರೆಗೆ ಯಿನ್ನೂ
ನನ್ನ ಸ್ವೈಗೆಯಿಂದಾಹೇಳ್ವಾರು ॥೮॥ ಯಿಂತುಹೇಳುತಿರಲೂ। ಯೆ
ಲ್ಲಾ ಕಂತೂರೂರಾನು ವ್ಯಾಘ್ರನಂತೆತಾನುಯೆಲ್ಲಾರಘರ್ಜಿಸಿನುಡಿ
ದಾನೂ। ಮಾನವಾಧೀಶಾಮತ್ತೆ ಜನರನೋಡಿಂತೆಂದಾನೂ ॥೯॥ ನೀ
ವುನಿಮಗೆಹೇಳೋದಕ್ಕೆ ನಿಮ್ಮನ್ನಾರು ಕರೆದಾರಿಲ್ಲಿಯನುತವುಲಿಯಂ
ತೆಗರ್ಜಿಸಿದಾ। ಅವರನೆಲ್ಲರನೂಸುಮ್ಮನೆಹೋಗೆಂದುತೆಗುಳಿದಾ ॥೧೦॥

ವ॥ ಆ ಸಮಯದಲ್ಲಿ ತಮ್ಮ ಕುಲಗುರುವಾದಂತಾ ವಸಿಷ್ಠಮು
ನೀಶ್ವರನು ಬಿಜಯಂಗೈದನೆಂತೆನೆ.

ರಾಗ॥ ನನ್ನನಾನಾನಾನಾನನ್ನನಾನಾನಾನಾ ॥ಪ॥ ಯೋಗಧ್ಯಾ

ಬ್ರಾಹ್ಮಣನನೋಡಿ ಮುಖಕ್ಕೆ ಶೆರಗುನಾರೆಮಾಡಿ ಅನೇಕದುಃಖವಂ ಮಾಡುತಿರಲು ಸುನಂದನೆಯು ನೋಡಿ ಆಶ್ಚರ್ಯಪಟ್ಟು ತಮ್ಮ ತಾಯಿಬಳಿಗೆ ಹೋಗಿ ಇಂತೆಂದಳೂ.

ಸಾಂಗತ್ಯಾ ॥ ಅಮ್ಮಾಜಿಕೇಳಿನ್ನುನಮ್ಮಪ್ರಭುರಾಣಿಯು । ಒಬ್ಬವಿಪ್ರನುತಾನುನೋಡಿ ॥ ೧ ॥ ನಮ್ಮಪ್ರಭುರಾಣಿಯುಒಬ್ಬವಿಪ್ರನನೋಡಿ । ಸುಮ್ಮಾನೆಅಳುತಾನಿಂದಿಹಳೂ ॥೨॥ ಮರ್ಮವಿದೇನೋತಿಳಿಯಲಾರದಿನ್ನೆಂದು । ತಮ್ಮತಾಯಿಗೆಪೇಳಲಾಗಾ ॥೩॥ ಗಮ್ಮಾನೆಬಂದುಪ್ರಭುರಾಣಿಯುಮುದ್ದಾಡಿ । ವಿಪ್ರನಬಳಿಗೆತಾಪೋಗಿ ॥೪॥ ಯಲಿವಿಪ್ರನಿನ್ನಕಂಡೀಕೆದುಃಖಿಸಲ್ಯಾಕೆ । ನೆಲೆಯಾವುದಿಲ್ಲಿಗೆಬಂದ ॥೫॥ ಪರಿಯನೆಲ್ಲವನೀನುವಿನಯದಿಂಪೇಳೆಂದು । ಸರಸೀಜವದನೆಕೇಳಿದಳೂ ॥೬॥ ಎಂದಮಾತನುಕೇಳಿವಸುದೇವತಾನಾಗ । ಚಂದದಿಂದೆಲ್ಲವುಸುರಿದನೂ ॥೭॥ ಈಕೆಯೆಭೀಮರಾಯನಮಗಳೆಂಬೋದು । ಲೋಕಪಾಲಕನಳರಾಜಾ ॥೮॥ ಸಾಕಾರದಿಂದಕರವಪಿಡಿದನಾರಿಯೂ । ಈಕೆಪೆಸರುದಮಯಂತೀ ॥ ೯ ॥ ಪೂರ್ವಫಲಗಳಿಂದಶೇರಿಜೂಜುಗಳಾಡಿ । ಧಾರುಣೀಯೆಲ್ಲಪುಷ್ಕರಗೆ ॥ ೧೦ ॥ ಸೇರಿಬಿಟ್ಟುಅಡವಿಗೆಪೋದನುದ್ದಿಯು । ಕೇಳಿಭೀಮನುದುಃಖದಿಂದಾ ॥೧೧॥ ನೋಡಿನೀಬಾರೆಂದುಗಾಡಾದಿಂಕಳುಹಲು । ರೂಢಿಯನೆಲ್ಲವನರಸುತಲೀ ॥ ನಾನುಮಾಡಿದಪೂರ್ವಫಲದಿಇಲ್ಲಿಗೆಬಂದು । ಗಾಡಿಕಾತಿಯಕೆರುಹಕಂಡೆ ॥೧೩॥ ವಸುದೇವನಿಂತುವೃತ್ತಾಂತವಪೇಳಲು । ಶಶಿಮುಖಿಯನುಬಿಗಿಯಪ್ಪಿ ॥೧೪॥

ವ ॥ ಇಂತು ಆ ವಿಪ್ರನುಪೇಳಿದ ಮಾತುಗಳಂಕೇಳಿ ದಮಯಂತಿಯ ಬಿಗಿಯಪ್ಪಿಕೊಂಡು ಪ್ರಲಾಪಿಸುತ್ತಿರ್ದಳದೆಂತೆನೆ.

ದ್ವಿಪದೆ ॥ ಧಾರುಣೀಶನುನಿನ್ನಬಿಟ್ಟುಪೋಗಲ್ಕೆ । ನಾರಿನೀನೆಂತುಬಾಧೆಯಪಟ್ಟೆ ಯಮ್ಮ ॥ ಭೂಮಿಾಶನೆಲ್ಲಿಗೆ ಪೋದನೋಕಾಣೆಯು । ನ್ನಮ್ಮನೀನು ಒಬ್ಬಳೆಇರಬಹುದೆ ॥ ಏಳುಸಮುದ್ರವನು ಏಕವಾಗಿನ್ನು । ಆಳುವಂತಾವನಿಗೆತರುಣಿನೀನಾಗಿ ॥ ಯಿಂತವೇಷವುನಿನಗೆ ದೊರಕಿತೆಯಮ್ಮ ॥ ಪಾಪಿನಾನಾದಕಾರಣದಿಂದಈಗ । ಈಪಾಪಕೆ

ಣ್ಣಿನೊಳುನೋಡುವಂತಾಯಿತ್ತು ॥ ನನ್ನಮ್ಮನನ್ನಕ್ಕನನ್ನರಗಿಣಿಯೆ । ಈಪಿವರಯನ್ನಕೊಡೆಪೇಳದೆನೀನು । ಯಾಕೆಮರಸಿದೆಎನ್ನಅರಿಯದವಳಂತೆ ॥ ನಿನಗೆನಾಚಿಕ್ಕಮ್ಮನಿಮ್ಮಮ್ಮನಾನು । ಕೊಡೆಹುಟ್ಟಿದೆನಮ್ಮಕುವಲಯನೇತ್ರೆ ॥ ಯೀಪಾತರದೊಳುನೀನುಯಿಲ್ಲಿಗೆಬಂದರೀತಿ । ಎಲ್ಲವುಯನಗೆವಾಜದೆಪೇಳು ॥

ವ ॥ ಇಂತೆಂದು ರಾಜಮಾತೆಯು ಅನೇಕದುಃಖದಿಂದ ಕೇಳಲು ದಮಯಂತಿ ತನ್ನ ಪೂರ್ವೋತ್ತರವಂ ಪೇಳುತಿರ್ದಾಳದೆಂತೆನೆ.

ತ್ರಿಪುಡೆ ॥ ಜೂಜನಾಡಿಯೆಎನ್ನರಮಣನು । ರಾಜ್ಯವೆಲ್ಲಾಸೋಲಲುಪೂಜ್ಯಗೆಟ್ಟಿಂನಡವಿಶೇರಿದರಾಜಿಯಿಂದಾ ॥೧॥ ಅಲ್ಲಿಎನ್ನರಮಣಪ್ರೊದ್ದಿಹಚ್ಚಡವನ್ನುಪಕ್ಷಿಯು । ನಿಲ್ಲದೆತೆಕ್ಕೊಂಡುಪೋದುದುಆಗಲಿನ್ನು ॥ ೨ ॥ ನನ್ನಶೀರೆಯುಶರಗನಾತಿಗೆಹೊದಿಸಿಇಬ್ಬರು । ದುಃಖದಿಂದಲಿಪೋಗುತಿರೆಅಲ್ಲೊಂದುಚಾವಡಿಯನ್ನುಕಂಡೂ ॥೩॥ ಅಲ್ಲಿನಾವಿರುತಿರಲುಆಗಲುಎನಗೆ ಮಾಯಾದನಿದ್ರೆಬರುತಿರೆ । ನನ್ನಕಷ್ಟವನೋಡಲಾರದೆಎನ್ನಪತಿಯೂ ॥೪॥ ಎನ್ನಶೀರೆಯುಶರಗುಭರದೊಳುಕರಿದುಎನ್ನಾರಮಣನು । ಕೊಂಡುಪೋಗಲುನಾನುಗಿಡದೊಳುಕಷ್ಟಪಡುತಾ ॥ ೫ ॥ ಬಹಳಚಿಂತೆಗಳಿಂದಸ್ಯೆಳೇಂದ್ರವೇಷವತಾಳಿ । ನಿಮ್ಮೊಳುಪೇಳದೆನಾನಿರ್ದೆನೆಂದಳುಕಮಲನಯನೆ ॥ ೬ ॥ ಶನಿಯುನಮ್ಮನುಪಿಡಿದಪಂಥದಿ ಘನದಕಷ್ಟವಪಡಿಸೆನನ್ನಯ । ವಿನಯನೆಲ್ಲಿಗೆಪೋದಕಾಣೆನುಯೆಂದುಮರುಗೆ ॥೭॥

ವ ॥ ಇಂತು ದಮಯಂತಿಯು ತನ್ನ ವೃತ್ತಾಂತವಂ ಪೇಳಲು ರಾಜಮಾತೆಯು ತನ್ನ ಮಗಳಕೊಡೆ ಯಿಂತೆಂದಳೂ.

ಕಂದ ॥ ದಮಯಂತಿನಿನ್ನರಮಣನು । ಅಮರಲೋಕದೊಳಗಿರಲುಅವನಿಯೊಳಿರಲು ॥ ಕ್ರಮದಿಂದಅರಸಿಕರಸುವೆ । ಕಮಲಾಕ್ಷಿಯೆ ಧರಿಸುಯಿಾಗವಸ್ತ್ರಾಭರಣವಾ ॥

ವ ॥ ಈ ರಾಜಮಾತೆಯು ದಮಯಂತಿಗೆ ವಸ್ತ್ರಾಭರಣಂಗಳಂ ತೆಂದು ಧರಿಸಿಕೋಎನಲು ದಮಯಂತಿ ಪೇಳುತಿರ್ದಾಳು.

ಎಕತಾಳ-ಅರ್ಧರೇಖು ॥ ನನ್ನಸರಿಯವರಮುಂದೆನಗೆಗೇಡಿನಿಂ

ದಾ ॥೧॥ ಇಂತುಆಭರಣವಎಂತುಧರಿಸುವೆನೊ ॥೨॥ ಎನ್ನ ಪತಿಯು ನನ್ನಬಿಟ್ಟ್ಹೋದಬಳಿಕ ॥೩॥ ವಸ್ತ್ರಾಭರಣಾಯಾಕೆವೀಳ್ಯನನಿಗ್ಯಾಕೆ ॥ ಪಂಚಬಾಣವುಪ್ರೋಲ್ವಪ್ರಾಣನಾಯಕನು ॥೪॥ ಬಂದುಎನಗೆತನ್ನ ಮುಖವತೋರಿದಾರೆ ॥೫॥ ತಲೆಯಶಿಕ್ಕಾನುತೆಗದುಮುಡಿಯಕಟ್ಟು ವೆನು ॥೬॥ ವಿನಯುನಿಲ್ಲದವಮ್ಯಾಲೆತನುವಿರಲ್ಯಾಕೆ ॥೭॥ ವಸ್ತ್ರಾಭ ರಣವುಯಾಕೆಶಿಸ್ತುನನಿಗ್ಯಾಕೆ ॥೯॥ ನಾನುಟ್ಟಶೀರೆಹೊತ್ತರ್ಪುನಹ ವುದಲ್ಲೊಲ್ಲೆ ॥೧೦॥ ಗಂಡನಿಲ್ಲದವಮ್ಯಾಲೆಬಂಡುಮುತ್ತ್ಯಾಕೆ ॥೧೧॥ ವಿನಯುನಿಲ್ಲದೆಘನಭೂಷಣವ್ಯಾಕೆ ॥ ೧೨ ॥ ಕಾಯಸುಖವೊಂದ್ಯಾಕೆ ಕಾಂತಿಯಿನ್ಯಾಕೆ ॥೧೩॥

ವ ॥ ಇಂತೆಂದುಹೇಳಿದ ದಮಯಂತಿಗೆ ರಾಜಮಾತೆ ಏನೆನ್ನು ತಿರ್ದಾಳೊ.

ಜಂಪೆ ॥ ಅಮ್ಮನಿಮ್ಮಯತಾಯಿತಂದೆಗಳಬಳಿಗೀಗ । ಸಮ್ಮತ ದಿಕರೆಕೊಂಡುಪೋಪೆಬಾರೆನಲೂ ॥೧॥ ರಾಜ್ಯಶೀಮೆಯೆಪೋಗಿರಮ ಣನೊಪೋಗಿನ್ನು । ಪೂಜ್ಯಗೆಟ್ಟನ್ನನಾಪೋಗಲ್ಕೆಜನರು ॥೨॥ ಚಿ ಕ್ಕಸಣ್ಣಮಾತುಗಳಆಡಿಕೊಂಬರುಯನ್ನ । ತಕ್ಕದಲ್ಲವುನಾನುಬರ ಲೊಲ್ಲೆಎನಲೂ ॥೩॥ ತಂದೆತಾಯಿಯುನೀವೆಬಂಧುಬಳಗವುನೀವೆ । ತಾಯೆನಾನಲ್ಲಿಗೆಬರಲಾರೆಎನಲೂ ॥೪॥ ಎಂದಮಾತನುಕೇಳಿಇಂದೀ ವರಾಕ್ಷಿಯನು । ಚಂದದಿಂದುಪಚರಿಸಿತಂದುಮನೆಬಡಿಶೀ ॥೭॥ ಪ ಲ್ಲಕ್ಕಿಯೊಳಗಿರಿಸಿವಂದಿಮಾಬಲಸಹಿತ । ಎಲ್ಲರನುಕಳುಹಿದಳುನಿಲ್ಲ ದಾಕೆಯನೂ ॥೯॥ ವಸುದೇವನಾಗದಮಯಂತಿಯನುಕರಕೊಂಡು। ಕುಶಲದಿಂಭೀಮರಾಯನಪುರಿಗೆಬರಲೂ ॥೧೦॥

ವ ॥ ಇಂತು ದಮಯಂತಿಯನ್ನ ವಸುದೇವನೆಂಬೊ ವಿಪ್ರನು ಕರಕೊಂಡು ವಿದರ್ಭಾಪುರಿಗೆ ಬಂದು ಪಲ್ಲಕ್ಕಿಯನ್ನಿಳಿದು ತಮ್ಮ ತಂದೆ ಭೀಮರಾಯನಪಾದಕ್ಕೆ ಮಣಿಯಲು ಭೀಮರಾಯನು ಮಗ ಳಂ ಬಿಗಿದಪ್ಪಿಕೊಂಡು ಕಂಬನಿಯಂಗರೆಯಲು ಅನಿತರೊಳು ದುಃ ಖವಂಮಾಡಿ ಯೇನೆನ್ನುತಿರ್ದಾನೊ.

ಯಾಲಪದ ॥ ಮಗಳೆನೀನುನಳರಾಜನಿಗೆ ಪಟ್ಟದರಾಣಿಯಾಗಿ

ದು॥ ಎಷ್ಟುಕಷ್ಟಾಪಟ್ಟೆಯೊ । ಎನ್ನಮ್ಮಾನಿನಗೆಕಟ್ಟುವಾರಬಟ್ಟೆ
ಯಿಲ್ಲಾದೆ ॥೧॥ ನಿನ್ನಾಸರಿಯಾನಾರೀಯರೆಲ್ಲಾ । ಇನ್ನೂಸುಖದೊ
ಳಿರಲಿಲ್ಲವೆ । ಮುನ್ನುಕಮಲಜನಿನ್ನಾಫಣೆಯಲ್ಲಿಈವೇರೆಬರೆದು । ನಿ
ನ್ನಕಷ್ಟಪಡಿಸುತಿರುತಿಹರೊ ॥೨॥ ಮಕ್ಕಳಿಲ್ಲದೆಇರಲುನಿಪಿಗೆ । ಮ
ಕ್ಕಳನ್ನುಕೊಟ್ಟಾಮುನಿಯೂ । ಈದುಃಖಗಳಿಗೆವಳಗೂಮಾಡಿದಾ ।
ಓಮಗಳೇನಿನಿಗೆತಕ್ಕರೂಪುಎಲ್ಲಿಬಂತಮ್ಮಾ ॥೩॥ ನಿನ್ನರೂಪುನಿನ್ನ
ಸೊಂಪು । ನಿನ್ನರಾಜ್ಯನಿನ್ನಭೋಗ । ಎಲ್ಲಿಹೋಯಿತಮ್ಮಾಈಗಲು
ಓಮಗಳೆಯೆಂದುತಲ್ಲಣಿಸುತ್ತಾದುಃಖಿಸಲು ॥ ೪ ॥ ಜೂಜಾನಾಡಿ
ರಾಜ್ಯಸೋತೂ । ಅಡವಿಗೆಪೋದಾನೆಂಬೊದ । ಕೇಳಿದಾಗನಿಂದಾ
ನಿಮ್ಮತಂದೆ । ಸಿಕ್ಕಿಪೀಕಕ್ಕೆಪೋಗಿತಾವೂಇನ್ನುಇರಲಿಲ್ಲಾ ॥ ೫ ॥
ನಿನ್ನಾಮಗಳಾವ ಸಾಸೂಡಿ । ಇನ್ನುನಾವುಕರಗೂತಿಹೆವು । ನಿ
ಮ್ಮಅಣ್ಣನುದಮನನೂತಾನೀಗಾ । ನಿಮ್ಮನುನೆನೆದು । ತಮ್ಮೊಳಗೆ
ತಾನುಕರಗುವನು ॥ ೬ ॥ ಎಂದುಇಬ್ಬರುಮಕ್ಕಳತಂದುತಾಯಿಬಾಬ
ಳಿಗೆಬಿಡಲೂ । ಆಗಾಕಾಂಯುಮೊಳಗೆಹಾಲೂನದಿಯಂತೆ । ಸುರಿಯು
ತ್ತಾಲಿರಲು । ತಾಯಿನೋಡಿದಾಳೆಸುತರಾನು ॥ ೭ ॥ ಮಕ್ಕಳಾನು
ನೋಡಿತಾಯಿ । ದುಃಖಾಪಟ್ಟುದಮಯಂತಿ । ಅಕ್ಕರಿಂದಲಿದಮನು
ಅಳುತಿರೆ । ಭೀಮರಾಯನುಬಂದು । ತಕ್ಕೈಸಿಕೊಂಡಾನುಈರ್ವರ
ನು ॥೮॥ ವ ॥ ಇಂತು ಭೀಮರಾಯನು ತನ್ನ ಮಗಳ ದುಃಖವಂ
ಪರಿಹರಿಸಿ ಆ ರಾಜಮಾತೆ ಕಳುಹಿಸಿದ ಪಲ್ಲಕ್ಕಿಯನ್ನು ಮಂತ್ರಿ
ಮಾನ್ಯರನ್ನು ಅವರ ಪಟ್ಟಣಕ್ಕೆ ಕಳುಹಿಸಿ ವಸುದೇವನೆಂಬ ಬ್ರಾ
ಹ್ಮಣನಂಕರಸಿ ಕರವಂಮುಗಿದು ಕನಕಾಭರಣಂಗಳಂಕೊಟ್ಟು ಕ
ಡುಭಕ್ತಿಯಿಂದ ಇಂತೆಂದನೊ.

ಏಕತಾಳ ॥ ಧರಣೀಸುರೇಂದ್ರ ನಿಮ್ಮದಯದಿಂದ । ಎನ್ನಮಗಳ
ಭರದಿಂದಕರತಂದುಪೊರದೆನೀಎನ್ನಾ ॥೧॥ ನಳರಾಜತಾನಿನ್ನುಇಳೆ
ಯೊಳಿರುವಪುರವ । ಬಳಿಯೊಳಿಲ್ಲಿರುವನೋತಿಳಿದುಬರಬೇಕು ॥೨॥
ಎನುತಹೇಳುತಲಿರೆಆನಿತರೊಳುದಮಯಂತೀ । ವನಿತೆಇಂತೆಂದಳೊ
ವಸುದೇವನೊಡನೆ ॥ ೩ ॥ ಧರಣೀಶನಯೋಧ್ಯಪುರದಧೊರೆಯಬಳಿ

ಯು । ಇರುತಿಹಮಾರುರೂಪುಗಳಿಂದತಾನೊ ॥೪॥ ನೀವುಇವನರೂಪುಕಾಣುವದಕೆಈಗ । ನಾನುನಿಮಿಗೆಬಂದುತಂತ್ರವಪೇಳ್ವೆ ॥೫॥ ನೀವ್ಹೋಪಟ್ಟಣಕೆಪ್ಹೋಗಿರುತುಪರ್ಣನೆಂಬುಯವನು। ಪೊಕ್ಕುಮಾತೂಪೇಳುವದೂ ॥ ನಳಚಕ್ರವರ್ತಿಯುಸತ್ಯವಂತನುಸರಿಯೆ ॥ ಅತ್ಯಂತಧಾರ್ಮಿಕನೆಹುದುತಾನಿನ್ನು । ಏಳುಸಮುದ್ರವಳಿಕದಿಂದಾಳುವನು। ಬಾಳಕಾನನಾದೊಳುವಲ್ಲಭೆಯುಬಿಟ್ಟು ॥೮॥ ಶೀರಯಶೆರಗನ್ನುಹರಕೊಂಡುತಾನಾಗಾ । ನಾರಿಯುಬಿಟ್ಟುತಾಪ್ಹೋಗಾಲುಬಹುದೆ ॥೯॥ ನಿದ್ರ್ಹೋಗುವಳಶೀರೆಛಿದ್ರದಿಂಹರಕೊಂಡು । ಕದ್ದುಪ್ಹೋಗಾಲುಬಹುದೆಕಾಂತೆಯುಬಿಟ್ಟು॥೧೦॥ ಈವೋರೆಯಲ್ಲಿನೀವುಧೋರೆಯುಬಳಿಯಲ್ಲಿವೇಳೆ । ಮಾತಿಗೆಪ್ರತಿಮಾತಾಯಾರುಪೇಳುವಾರೊ ॥೧೧॥ ಆತಾನೆಗುರುತುಪ್ರೀತಿಯಿಂದಲಿನೋಡಿ। ಮಾತನಾಡದೆನೀವುತಿರಿಗಿಬಹುದು । ಆವ್ಯಾಲೆನಿಮಿಗೊಂದುವಿವರವಪೇಳ್ವೆನು । ಬ್ರಾಹ್ಮಣರನೀವೀಗತೆರಳಿಪ್ಹೋಗುವದೊ ॥೧೨॥

ವ ॥ ಇಂತೆಂದು ದಮಯಂತಿ ಪೇಳಲು ವಸುದೇವನೆಂಬ ಬ್ರಾಹ್ಮಣನು ಅಯೋಧ್ಯಾಪುರಕ್ಕೆ ಪೋಗಿ ಆ ಪಟ್ಟಣವೆಲ್ಲಾ ಶೋಧಿಸಿ ಎಲ್ಲಿಯೂ ಕಾಣದೆ ಆ ಧೋರೆಯ ಸನ್ನಿಧಾನಕ್ಕೆಪ್ಹೋಗಿ ಯೇನೆನ್ನುತಿರ್ದಾನೊ.

ಜಂಪೆ ॥ ಕ್ಷಿತಿನಾಥನಳರಾಜಸತಿಗೆಮಾಡಿದಕೆಲಸ । ಏನುಪೇಳಲಿನಾನುಕೇಳಲಿನ್ನೇನು ॥೧॥ ಮೋಲುಅರಿಯದೆಅವನುಜೂಜವನುತಾನಾಡಿ । ಕಾಲಗತಿಯಿಂದರಾಜ್ಯವನೆಲ್ಲಸೋತೂ ॥೨। ವನಿತೆಯುನುಬಡಗೊಂಡುಅರಣ್ಯವನುಶೇರಿ । ತಾವುಈರ್ವರುಬಂದುತಾವಿನೊಳುಕುಳಿತೂ॥ ಬಳಲಿಕೆಯೊಳಿರುತಿರಲುಬಳಿಕತನ್ನಯಸತಿಯು । ಅರಸಿನಿದ್ರೆಯೊಳಿರಲುಅವಳಶೀರೆಯನು ॥೪॥ ಹರಕೊಂಡುಆಕೆಯನುಅರಣ್ಯಾದೊಳುಬಿಟ್ಟುತೆರಳಿಪೋಗಲುತನಿಗೆನ್ಯಾಯವೇಕೇಳೀ ॥ ಘೋರಕಾನನದೊಳಗೆನಾರಿಯನುಬಿಟ್ಟನ್ನು । ಮೀರಿಪ್ಹೋಗಲುತನ್ನಪೌರುಷವೇನಾಯ್ತೂ । ತರಳಾಕ್ಷಿತನಿಗೇನುತಪ್ಪುಮಾಡಿದಳವಳೆ । ಅಡವಿಯಲಿಬಿಟ್ಟುಪಾಪವಕಟ್ಟಿಕೊಂಡು ॥೭॥ ತನ್ನಂತೆಧೋರೆಯುಈವೋರೆಯ

ಲಿಮಾಡಿದರೆ । ಭೀಮರಾಯನುಮತ್ತೆನಂಬವನೆಯಿನ್ನೂ ॥೪॥ ದೇವೆಂದ್ರಮೊದಲಾದದೇವತೆಗಳನುಬಿಟ್ಟು । ಅಇಂದುಮುಖಿಯುತಾಮದುವೆಯಾಗಲ್ಕೇ ॥

ವ ॥ ಇಂತೆಂದು ವಸುದೇವನೆಂಬೊ ಬ್ರಾಹ್ಮಣ ರುತುಪರ್ನನಕೊಡೆ ಪೇಳಿಮತ್ತಿಂತೆಂದನೂ.

ತ್ರಿಪುಡೆ ॥ ಮೋಸಮಾಡಿಯೆಬಿಟ್ಟುಅವಳನುತಾನುಪೋದಾಇಳೆಯೊಳು ॥ ದೇಶದೊಳುನಗೆಗೇಡಿಗೊಳಗಾದನುಮಹೀಶಾ ॥೧॥ ಪೋಗಲಾಗಲುತನ್ನಸತಿಯನುತಾಯಿತಂದೆಯುಬಳಿಗೆಕಳುಹದೆ । ಅನ್ಯಾಯದಲಿತಾಬಿಟ್ಟುಪೋದನುನ್ಯಾಯವೇನ್ನೈ ॥ ಅಲ್ಲಿಆಕೆಯುದೈವಪುತ್ನದಿತನ್ನತಾಯಿಯಮನೆಯಶೇರಿದಳು । ಅವನುಆಕೆಯಬಿಟ್ಟುಪೋದನುಧರ್ಮವೇನ್ನೈ ॥೩॥ ಪೋಗುವಾಗತನ್ನಮಡದಿಯಶೀರೆಯನುಹರಕೊಂಡುಪೋಪರತನ್ನಸರಿಧೊರೆಗಳಲಿನಾಚಿಕೆಇಲ್ಲವೇನ್ನೈ ॥೪॥ ಅರ್ಧಶೀರೆಯನುಟ್ಟುಯಿಂತಿಯುನಿರ್ದರಿಸಿಚಿಂತೆಯನುಮಾಡುತ। ಪದ್ಮಗಂಧಿಯುತನ್ನಪುರುಷನದಾರಿನೋಡಿ ॥೫॥ ಹಗಲಿರುಳುಕರಗುತ್ತಲಾಕೆಯುಅನ್ನನೀರೂಇಲ್ಲದೆ । ಸುಗುಣೆತಪವನುಮಾಡುತಿರ್ದಳುಧೊರೆಯೆಕೇಳ್‌ಂ ॥ ೨ ॥ ಅವನಿಯೊಳಗಿಹಎಲ್ಲರಾಜ್ಯಾವಅರಶಿನಾಬಂದೆನೂ । ವನಿತೆಬಂದುದಿನವಕಳವುದುವರುಷದಂತೆ ॥

ವ ॥ ಇಂತೆಂದು ಪೇಳಿದ ಬ್ರಾಹ್ಮಣನಕೊಡೆ ರುತುಪರ್ನ ಏನೆನ್ನುತಿರ್ದಾನೊ.

ಕುರುಚುಜಂಪೆ ॥ ಧಾರುಣೀಸುರನೀನು । ಅವನ। ದೂರುವದುನ್ಯಾಯವಲ್ಲೆಂದು॥೧॥ ಪೂರ್ವಾರ್ಜಿತದಫಲವುಇರಲು। ಅದನು। ಮೀರುವರೆಹರಿಹರರಿಗಳವೂ ॥೨॥ ವೂರುಗಳತಿರುಗಿನೀನು । ಅವನ। ದೂರುಮಾಡುವದುಬಹುನೋವು ॥ ನೇರಾಜನಾಪುಣ್ಯದಿಂದಾ । ನಳನಮುಖಿ । ಶೇರಿಕೊಂಡಳುತವುರುಚಂದ ॥೪॥ ಅದುವಂದುಸಾಲದೆತವಿಸೆ । ಇನ್ನು । ಆರಾಜನಿಗೆವಿನುಕೊರತೆ ॥೫॥ ಅರಸಿಎಲ್ಲಾದರೂಅವನ। ಕರದುತರಿಸದೆಅಡುವರೇವನ ॥೬॥ ಇಂತುರುತುಪರ್ನನಾಡಲ್ಕೆ । ಕೇಳಿ ॥ ಎಂದಬಾಹುಕನುನಸುನಗುತಾ ॥

ವ॥ ಇಂತೆಂದು ಬಾಹುಕನು ಆ ವಸುದೇವನೆಂಬ ಬ್ರಾಹ್ಮಣ
ನಕೂಡೆ ಇಂತೆಂದನೂ.

ದ್ವಿಪದೆ॥ ಆನಳನಗುಣಗಳನುನೆಳಿನಾಕ್ಷಿತಾನು । ತಿಳಿದುತಿಳಿ
ಯದತೆರದಿವನಿತೆತಾನೀಗ । ಜನನಾಥಚಂದ್ರನತಡಕುವರನಿಮ್ಮ ।
ಕಳುಹಿಕಾಮೋರೆದೂರುವನುಬಹುಕೋರತೆ ॥ ಪುರುಷನುಸತಿಗೇನೀತ
ಪ್ಪುಮಾಡಿದರು । ಸತಿತನ್ನ ಶರೀರವೊಳುಯಿಂಬಿಟ್ಟುಇರಲು । ಇಹ
ಪರದೊಳುಸೌಖ್ಯಸುಖದಿಬಾಳುವಳು ॥ ಧರ್ಮಶಾಸ್ತ್ರಗಳುಕಾಣೋಇ
ರುತಿರಲು । ಧರ್ಮವನುಬಿಟ್ಟುವನಿತೆತಾನಿನ್ನ । ದೊರಿಸುವರಇಂತು
ಧೊರೆಗಳಬಳಿಯು॥ ಎಂದುಕಾಮೋರೆಪ್ರತಿಮಾತುಆಡಿದವಿಕೃತರೂಪ
ನ। ವಿವರದಿಂನೋಡಿನಿತರೊಳುವಸುದೇವನೆಂಬೊ । ಬ್ರಾಹ್ಮಣನು
ತಡೆಯದೆಬಂದುವಿದರ್ಭಾಪುರಿಯುಶೇರಿ । ವಸುದೇವತಾನಿನ್ನ ಶಶಿಮು
ಖಿಯಕಂಡು । ಪೇಳ್ದ ವಿವರವೆಲ್ಲಭೀಮರಾಯನೊಳುಪೇಳಿ।ಭೀಮರಾ
ಯನುತನ್ನಸುತೆಯನ್ನು ಕಳಿಸಿ। ಬಂದುದಮಯಂತಿವಸುದೇವನಂ
ನೋಡಿ । ಕ್ರಮದಿಂದನೀಪೋದವಿವರವೇನೆನಲು । ವಸುದೇವನಾಗ
ದಮಯಂತಿಗಿಂತೆಂದ ॥ ಅಮ್ಮನೀಪೇಳಿದಮಾತುಗಳನೆಲ್ಲ । ಕ್ರಮ
ದಿಂದರುತುಪರ್ನನೋಲಗಕೆಪೋಗಿ । ನೀವುಪೇಳಿದಮಾತು। ನಾನೆ
ಲ್ಲಪೇಳೆಆಮಾತುಕೇಳಿಒಬ್ಬನುತಾಬಂದುಮಾತಿಗೆ । ಪ್ರತಿಮಾತನಾ
ಡಿದನಮ್ಮಅವನಿರುವವಿಸ್ತಾರವೆಲ್ಲವಂಪೇಳ್ವೆ। ವಿಪರೀತರೂಪಿನವಿವರ
ವಂಕೇಳು ॥ ಗುಜ್ಜುರೂಪನುಬೊಜ್ಜೆಹೊಟ್ಟೆಯುತನಿಗೆ । ಮೋಟಾದ
ಕೈಗಳುಮೋಟಾದಮೂಸೆ। ಬವರಿಗಡ್ಡವುತನಗೆಗುಜ್ಜುಪಾದಗಳುಈ
ಚಂದದವಬಂದುಮಾರು ಮಾತನುನುಡಿದಾ । ಮಾತುಗಳನ್ನು ಕೇ
ಳಿನಾತೆರಳಿಬಂದೆ । ಎಂದುವಸುದೇವನುವೃತ್ತಾಂತವೆಲ್ಲಪೇಳಲು। ಆ
ವನಿತೆಕೇಳಿಚಿಂತೆಯುಳಿತನೆನ್ನ ಯರಮಣನುಎಂದು । ತಿಳಿದುಮ
ನದೊಳಗೆಬೇರೊಂದುಯೋಚನೆಯುಮಾಡಿ । ತಮ್ಮತಂದೆಯಕೊ
ಡೆಇಂತೆಂದಳಾಗಾ । ಈಗನಾನಿನಗೊಂದುಕಾಯಮಂಪೇಳ್ವೆನ್ನರ
ಮಣನುಅಲ್ಲಿಮಾರರೂಪಿನಲಿಇರುವನು । ರುತುಪರ್ನನಾಬಾಹುಕನಿಂದು
ಲ್ಲಿಆತನಿಲ್ಲಿಗೆಬರುವತಂತ್ರವಂ । ಪೇಳ್ವೆನೀಪೀಗಚರರನ್ನೋಣವಂಮಾ

ಡಿ ॥ ಅಯೋಧ್ಯಾಪುರಿಯ ಋತುಪರ್ಣನೆಡೆಗೆ । ವಿನಯದಿಂದಾಳಿ
ಯನು ಬರಹ ಮುಕ್ಕಳುಹುವನು । ನಳರಾಜಹೋದನು ಇಳೆಯೊಳಗೆಲ್ಲಾ
ಅರಸಿ ಕಾಣದೆ ಈಗ ಭರವಸದಿಂದಾ । ಆ ದಮಯಂತಿ ಅತಿಶೀಘ್ರವಾಗಿ
ಕ್ರಮದಿಂದ ಎರಡನೆಯ ಕಲ್ಯಾಣವೆಂದು । ಭರದಿಂದ ಕಳುಹಲು ಬರು
ವರು । ಎಲ್ಲ ಭುವನದೊಳಗಿರುವ ದೊರೆಗಳು । ಬರುತಲಿಹರು ನೀವು ಕಲ್ಯಾ
ಣಕ್ಕೆ ಬರಬೇಕು । ಎನಲು ಋತುಪರ್ಣನೆಡೆಗೆ ಕಳುಹಿದರೆ । ಬರುವ ಆತ
ನ ಸಂಗಡ ಬರುವನು ತಾನು । ರಥಸಾರಥಿಯ ಮಾಡಿಕೊಂಡು ಋತು
ಪರ್ಣ ಕರಕೊಂಡು ಬರುವನು ಧರಣೀಶ ನಳನು । ಭೀಮನು ಕೇಳಿ ಇದು
ಕಾರ್ಯವಹುದೆಂದು । ಪ್ರೇಮದಿಂ ಮಂತ್ರಿ ಪ್ರಮುಖರೊಡನೆ । ಹೇ
ಳಿತಗುಪ್ತನುತ್ತಾವು ಸಮ್ಮತಿಪಟ್ಟು । ವಿನಯದಿಂ ಪೇಳಲು ವಸುಧೀಶ
ನಾಗ । ಶಶಿಮುಖಿಯು ಹೇಳಿದ ಕ್ರಮವೆಲ್ಲ ತಿಳಿದು । ವಸುದೇವನೆಂಕೆ
ರಮು ಇಂತೆಂದಾ

ವಚನ। ಇಂತು ಭೀಮರಾಯನು ದಮಯಂತಿ ಪೇಳಿದ ವಿವರವಂ
ಕೇಳಿ ವಸುದೇವನೆಂಬೊ ಬ್ರಾಹ್ಮಣನ ಕರಸಿ ಏನೆನ್ನುತ್ತಿರ್ದಾನೊ

ಕಂದ। ವಸುದೇವ ಪೋಗಿ ಈಗಲು । ಋತುಪರ್ಣನು ಇರುವ ಬಳಿ
ಗೆ ಪೋಗುತೆಂದಾತನು। ವಸುಧೆಯೊಳಗೆಲ್ಲ ನಳನನು ಕಾಣದೆ ದಮಯಂ
ತಿಗೀಗ ಎರಡನೆ ಮದುವೆ ॥೧॥ ಭೀಮನಿಂತೆಂದು ಪೇಳಲು । ಪ್ರೇಮದಿ
ತಾ ಪೊರಟನಾಗ ತಾನು ಚವಿಲ್ಲನೆ ॥ ಶೀಘ್ರಯುತಾಂಡಿ ಅಯೋಧ್ಯಕೆ ।
ಬಂದು ಋತುಪರ್ಣನ ಪ್ರಕಂಪಿಂತೆಂದನೊ ॥ ೨ ॥ ಭುವನೇಶ ನೀವು
ಕೇಳ್ವುದು ಭಾಮಿನಿ ದಮಯಂತಿಗೀಗ ಎರಡನೆ ಮದುವೆ ಆಗುತಲಿದೆ
ನೀವು ಬರುವನು ಎನೆನುತಲಿ ನಿಂದು ಕರವ ಮುಗಿದಿಂತೆಂದನೊ॥

ವ ॥ ಇಂತು ತಾನು ಪೇಳಿದ ವಸುದೇವನೆಂಬೊ ಬ್ರಾಹ್ಮಣನ ಮಾ
ತುಗಳಂ ಕೇಳಿ ಋತುಪರ್ಣನೇನೆನ್ನುತ್ತಿರ್ದಾನೊ.

ಜಂಪೆ। ಕೇಳ್ವೆ ವಸುದೇವ ಇಳೆಯೊಳಗೆ ನಳರಾಜ । ನಿಲ್ಲದಿರೆ ದ
ಮಯಂತಿಗೆ ಮದುವೆ ಮಾಡುವರೆ ॥೧॥ ಮದುವೆಯನು ಮಾಡಿ ವರಳಿ
ಡಿಕೊಳ್ಳ ರಜನರು । ರೂಢಿಯೊಳು ಇದು ಚೋದ್ಯವೆಂದ ಋತುಪರ್ಣ।
ಎಂದ ಮಾತನು ಕೇಳಿ ಚಂದದಿಂ ವಸುದೇವ । ನಿಂದು ಕರಗಳ ಮುಗಿದ

ಯಿಂತೆಂದನಾಗ ॥

ವಚನ ॥ ಇಂತು ವಸುದೇವನು ಋತುಪರ್ಣನೊಡನೆ ಪುನಃ ಯಿಂತೆಂದನು.

ಕುರುಚುಜಂಪೆ ॥ ಭುವನೇಶಕೇಳುನೀನೀಗಾ। ನಾನು। ಭುವನವೆಲ್ಲವುಶೋಧಿಸೀಗಾ ॥೧॥ ನಳನಕಾಣದೆಯಿನ್ನುನಾನು। ಯೆಲ್ಲನೋಡುತಲಿಇಳೆಯುತಿರಿಗಿದೆನು ॥೨॥ ನಮ್ಮಭೀಮರಾಯನುಯೀಗಾ। ಮಗಳಿಗೀಯುರಡನೆಕಲ್ಯಾಣಬೇಗಾ ॥೩॥ ಮಾಡಬೇಕೆಂದುನಿಶ್ಚೈಸಿ ॥ ಈಗ ರೂಢಿಯೊಳುಧೊರೆಗಳನುಕರಸಿ ॥೪॥ ದಮಯಂತಿಕಲ್ಯಾಣಕೀಗ ನೀವುಮುದದಿಂದಬರಬೇಕುಬೇಗಾ ॥೫॥ ಹೇಳಿಯಾವಸುದೇವಧೊರೆಗೆ। ತಾನು॥ ಸಂತೋಷದಿಂದತಾಪೋಗೆ ॥ ೬॥ ಬಂದುಭೀಮನಿಗೆ ಆವಾರ್ತೆ ॥ ತಾನು॥ ಚಂದದಿ ಹೇಳ್ದವಸುದೇವಾ ॥

ವ॥ ಇಂತೆಂದು ವಸುದೇವನೆಂಬೊಬ್ರಾಹ್ಮಣನು ಈ ವೃತ್ತಾಂತವನ್ನು ಭೀಮರಾಯನಿಗೆ ಹೇಳಿತನ್ನಸದನಕ್ಕೆ ಪೋಗಲು ಅತ್ತಲಿ ಯೋಧ್ಯಾಪುರದರುತುಪರ್ಣನು ಬಾಹುಕನಂಕರೆದು ಇಂತೆಂದನು॥

ದ್ವಿಪದೆ ॥ ಆಗಲಿರುತುಪರ್ಣನೆಲ್ಲರಂಕರೆಸಿ । ಬೇಗದಿಂಬಾಹುಕಗೆ ಯಿಂತೆಂದುಹೇಳ್ದಾ। ಈಗನೀನೆನ್ನರಥಕೆತುರಗಗಳ ಬೇಗದಿಂಜೋಡಿಸಿರಚನೆಗಳಿಂದರಚಿಸೆಂದುಹೇಳ್ದನಾಬಾಹುಕೆಂಗೆ ॥

ವ॥ ಇಂತೆಂದು ರುತುಪರ್ಣನು ಬಾಹುಕನಂ ಕಳುಹಲು ಆತನ ಕುದುರೆಲಾಯಕ್ಕೆಬಂದು ಸರಿಯಿಲ್ಲದ ಅಶ್ವಗಳಂ ತಂದು ನಿಲ್ಲಿಸಲು ಮೊದಲುತನ್ನಬಳಿಯೊಳಿರ್ದ ವಾರ್ಷ್ಣೇಯನು ಈತನ ಮಾರುರೂಪಿನೊಳಿರ್ದ ಗುರುತಂತಿಳಿಯದೆ ಇಂತೆಂದನು.

ಕಂ॥ ಬಾಹುಕನೆನೀನುಈಗಲು । ತೀವ್ರದಿಕುದುರೆಗಳಕೊಂಡು ಪೋಪುದುಯೆಲ್ಲಿಗೆ ।ವಾಜಪೆಹೇಳ್ವುದುಎನುತಲಿ।ಕೇಳಲುಬಾಹುಕನು ಹೇಳ್ದವಾರ್ಷ್ಣೇಯನಿಗೆ ॥

ಜಂಪೆ ॥ ಕೇಳುವಾರ್ಷ್ಣೇಯನಾಹೇಳುವೆನುನಿನಗೀಗ। ಇಳೆಯೊಳಗೆ ಭೀಮರಾಯನುಎಂಬಧೊರೆಯು ॥೧॥ ಆಳಿಯನಾನಳರಾಜಚಂದ್ರನಾತನಸತಿಯು । ಘನಘೋರಅಡವಿಯೊಳುಬಿಟ್ಟುತಾಪೋಗೆ ॥೨॥

ಮನದೊಳಗೆಕೋಪವನುಮಾಡಿ॥ಆಳಿಯನೆಮ್ಮಾಳಿ। ಪುನಹತನ್ನಯ
ಸುತೆಗೆಕಲ್ಯಾಣವೆಂದು ॥೩॥ ಅನುಕೂಲವನುಮಾಡಿಘನವಾದಘೋರ
ಗಳನು । ವಿನಯದಿಂಕರಸೇಕಿಗಲುನಮ್ಮಧೊರೆಯು ॥ ಬರಹೇಳಿದ
ಲಗಳಕಳುಹಿದರೆನಮ್ಮಧೊರೆ । ಹರುಷದಿಂಪೋಗುವರೆಸರಿಯಾದಕು
ದುರೆ ॥೪॥ ಭರದಿಂದಕಟ್ಟಿರಥವಶೃಂಗರಿಸೆಂದು । ಕಳುಹಿದರೆನಾಬಂ
ದೆನೆಂದಬಾಹುಕನು ॥ ೬ ॥

ವ ॥ ಇಂತೆಂದು ಹೇಳಿದ ವಾರ್ಷ್ಣೇಯನು ಅನೇಕದುಃಖದಿಂದ
ಬಾಹುಕನೊಡನೆ ಯಿಂತೆಂದನೂ.

ಅಟತಾಳ-ಅರ್ಧ-ರೇಖು ॥ ನರಲೋಕಪತಿಯಾದನಳರಾಜಗಿನ್ನು
ಇಂತಾಅಪಕೀರ್ತಿಯುಬರಬಹುದೆಎಂದಾ । ಆರಾಜನೆಲ್ಲಿಗೆ ಪೋದ
ನೋಕಾಣೆ । ಅವನನಂಬಿದಜನಕೆಅತಿಕಷ್ಟಬಂತು। ನನ್ನವೃತ್ತಾಂತವ
ಚನ್ನಾಗಿಕೇಳು। ನಳರಾಜಚಂದ್ರಸೇನ್ನಾಳಿದಧೊರೆಯು। ಅತನರಥ
ಕೆನಾನುಸಾರಥಿಯಾಗಿ। ಇದ್ದೇನುಮುದದಿಂದ ಅತಾನಬಳಿಯಾನ
ನ್ನಾಹೆಸರುವಾರ್ಷ್ಣೇಯ ಕೇಳೈಯ್ಯಾ । ಆನಳರಾಜಾಜೂಜಾಗಳನಾ
ಡುವಾಗ । ಅವನಸುತರಅವನಮಾವನಬಳಿಗೆಕರಕೊಂಡುಪೋಗೆಂ
ದುಅಪ್ಪಣೆಕೊಡಲೂ । ಕರಕೊಂಡುಪೋದೇನುಹರುಷದಿಂನಾನೂ ॥
ಅಭೀಮರಾಯಗೆಸುತರವಪ್ಪಿಸಿನಾನು । ಬರುವಂತೆವ್ಯಾಳ್ಯದಿ ಆನಳ
ರಾಜಾ। ಇಳೆಯನೆಲ್ಲವಸೋತುಅಡವಿಯಸೇರಿದಅವಾರ್ತೆನಾಕೇಳಿಅತಿ
ಚಿಂತೆಯಿಂದಾ। ಇಲ್ಲಿಗೆನಾಬಂದುಸೇರಿದನೈಯ್ಯಾ ॥ ಶನಿಯುಂತುಮಾ
ಡಿದನಳರಾಜನನ್ನು । ಎನುತಕಂಬನಿಗರೆದುಅತಿದುಃಖದಿಂದಾ।ಇರು
ತಿರೆವಾರ್ಷ್ಣೇಯನೆಂಬೊಸಾರಥಿಯು ॥ ನೋಡಿಬಾಹುಕನಾಗಇಂತೆಂ
ದುತ್ತನು। ದುಃಖವ್ಯಾತಕೆನಿನಗೆಬ್ಯಾಡವೆಂದೆನುತಾ । ಅಕ್ಕರಿಂದರಿ
ಹೇಳಿಪೋದಬಾಹುಕನೂ । ಕೋಟಿಸೂರ್ಯನಪ್ರಭೆಗೆಮಿಟಾದರಥ
ಕೆ। ಅದಕೆಕಟ್ಟಿದನೆರಡು ಬಡಕುದುರೆಗಳನೂ। ಸಕಲಆಯುಧವನ್ನು
ಹುಸ್ತ್ರೈದಮಾಡಿ ಬಂದುಘೋರಗೆತಾನುಜಂದದಿಂಕೇಳ್ದ । ಆಗತಾ
ನುಬಂದುರಥದಾರೀತಿಯನೋಡಿ । ಮಂದಿನಾಬರ್ಣಸಹಿತವಿವಾ
ರವೆಲ್ಲಾ। ಕೆಟ್ಟಪರ್ಣಕುದುರೆಯಕಂಡುರುತುಪರ್ಣ ॥ ಇದುಯೇನು

ಬಾಹುಕಾ ಇಂತಪ್ಪರಥಕೆ॥ ಘನಕೆಂಪೊಂಕೆಂಡಾಕಟ್ಟಿದಂನಡಿಯೋ ಬೆಸೆಟ್ಟಾತನದಿಂದ । ಎಂದಮಾತನುಕೇಳಿಚಂದದಿಂದಾಗ । ಬಂದು ಪಿ ಹೂತ್ಕಾರವಂಮಾಡಿಎಂದೆಬಾಹುಕಾನು। ಎಂದಮಾತನುಕೇಳಿಋ ರುತುಪರ್ಣ। ಬಂದುಕೇಳಿತಾನುಬೇಗಅತಿಶಯದಿಂದಾ । ರಥವನಡ ಸೂಎಂದುಸಾರಥಿಗೆಪೇಳ್ದಾ ॥

ವ॥ ಇಂತೆಂದುರುತುಪರ್ಣನು ಬಾಹುಕನಕೂಡೆ ಅತಿಶೀಘ್ರದಿಂ ದರಥವನಡಸೆಂದುಪೇಳಲುಬಾಹುಕನುನಡಸಿದರೆ ಪೋಗದಿರಲುರು ತುಪರ್ಣನಿಂತೆಂದನು ॥

ಜಂಪೆ॥ ಅದುಕಂಡುರುತುಪರ್ಣನೆಂದನಾಸಾರಥಿಗೆ । ಇದುಯೋ ನೋಬಾಹುಕಈಅಶ್ವಹೃದಯ ॥೧॥ ಬಲ್ಲನೆನುತನೀನುಬಂದುಪೇಳಿ ದೆಮೊದಲಿಇಲ್ಲಿಈಗಲುನೀನು। ಬಡಕುದುರೆಗಳನೂ ॥೨॥ ತಂದುಕಟ್ಟಿ ದೆನೀನು। ಇಂದುಕಾರಥಕೀಗ । ಮುಂದೆಶತಯೋಜನವುಭೀಮನಾಪು ರವು ॥೩॥ ಸೂರ್ಯನಸ್ತಾದ್ರಿಗೆ ಪೋಗುವನಿತರೊಳ್ಳಾವು। ಶೇರಬೇ ಕೆತುರಗನಡಿಯುವದೆಎನಲೂ ॥೪॥ ಎಂದಮಾತನುಕೇಳಿಬಾಹುಕನು ಇಂತೆಂದು। ಮುಂದೆನೋಡಿತುರಗವಾರ್ಷ್ಣೇಯನೀವುಅನಿಲವೇಗಂ ಗಳರಿಇನನು। ಅಸ್ತಾದ್ರಿಗೆಪೋಪಸಮಯಕೆಮುಂಚೆನಾವುಸೇರುವೆ ವೂ॥೫॥ ಇನ್ನಿದನುನೋಡೆಂದುಸನ್ನೆಮಾಡಲುರಥ। ವೆಧರಣಿತಲ್ಲಣಿ ಸುತ್ತತೆರಳಿತಾರಥವೂ ॥ ೬ ॥ ಅನಿಲವೇಗಗಳಿಂದತುರಗಗಳುಪೋ ಗುತಿರೆ। ಘನಘೋರಅರಣ್ಯದೊಳಗೇವಾಗ ॥೭॥ ಪೋಗುವಾಸಮ ಯದೊಳುಅಧೋರಿಯವಸ್ತ್ರವದು ಸರಿದುಬೀಳಲುನೋಡಿನಿಲಿಸೆಂದು ರಥವಾ ॥ ಜಾರಿಎನ್ನಯವಸ್ತ್ರಶೇರಿನೆಲದೊಳುಬಿತ್ತು। ತೆರಬೇಕುಯೆಂ ದೆನಲುನಗುತಬಾಹುಕನು ॥ ಧೋರಯುಮುಖವನುನೋಡಿಎಂದಬಾ ಹುಕನಾಗ । ನಿನ್ನವಸ್ತ್ರವುಇಹುದುಯೋಜನದೊಳೆಂದಾ ॥ ೧೧ ॥ ಮಾತಾಡೋಅನಿತರೊಳುಎಷ್ಟುದೂರವಬಂತು । ರೀತಿಯಂತೋರು ನೀನೆಡನುವದುಎಂದಾ ॥೧೨॥ ಇಂತುರಥವನುನಡಸೂವಂತೆಚಮ ತ್ಕಾರವನು । ನೋಡಿಇಂತೆಂದನಾಧರಣಿಪಾಲಕನೂ ॥೧೩॥ ನಿನ್ನಂ ತೆರಥಗಳನುನಡೆಸುವರನಾಕಾಣೆಮುನ್ನ । ಈಅವನಿಯೊಳುನಾವರಿ

ಯೆನೆಂದಾ ॥೧೪॥ ವಿನಯದಿಂದಲಿಪೇಳ್ವೆನಿನ್ನ ಮೆಚ್ಚಿದೆನಾನು । ನನಿಗೆಪೇಳೀವಿದ್ಯೆನಿನಗೊಂದುಪೇಳ್ವೆ ॥೧೫॥ ಮುಂದೆಕಾಣುವನಿಯೊಳುವಂದುತ್ತರದಿಮರವು । ಚಂದದಿಂದಲೀಅದರವಿವರವಂಪೇಳ್ವೆ ॥ ಆಮರದಬುಡದಲ್ಲಿ ಎರಡುಕವಲಿರುತಿಹುದು । ಆ ಎರಡುಕೊಂಬೆಗಿನ್ನೂರುಕವಲಿಹುದೂ ॥೧೭॥ ಒಂದುಕವಲಿಗೆಎರಡುಸಾವಿರದಫಲವಿಹುದು । ಬೆಳೆತಿಹುದುದದಕಿನ್ನು ಬೇರುವೆಳ್ನೂರೂ ॥ ೧೮ ॥ ಅದರವಲೆಗಳುಇನ್ನು ಅಗಲದಿಂದಿರುತಿಹುದು । ನೆರೆಯುತ್ತಆಮರವುಬೆಳೆತಲ್ಲಿಇಹುದು ॥ ೧೯ ॥ ಒಂದುಕೊಂಬೆಗೆಇನ್ನು ಹತ್ತುಸಾವಿರಕಾಯಿ । ಚತುರತನದಿಂದಿಹುದುಅದರವಿದ್ಯೆವನು ॥೨೦॥ ಬಲ್ಲೆನೆಂದೆನಿನಗಿನ್ನು ಎಲ್ಲವನುಪೇಳುವೆನು । ನಿಲ್ಲದೆವೇಗಪೋಗಿನೋಡಿಬಾರೆನಲು ॥೨೧॥

ವ ॥ ಇಂತೆಂದು ಋತುಪರ್ಣನವಾರ್ತೆಗೆ ಬಾಹುಕನು ರಥವಿಳಿದು ಪೋಗುತಿರಲು ಇತ್ತಲಾಋತುಪರ್ಣನು ನಿಧಾನದಿಂದ ರಥವಂ ನಡೆಸಿಕೊಂಡು ಪೋಗುತಿರಲು ಅನಿತರೊಳು ಬಾಹುಕನು ಆ ತಾರೆ ಮರದಬಳಿಗೆಪೋಗಿ ಋತುಪರ್ಣನು ಹೇಳಿದಪ್ರಕಾರಿಗೆ ಲೆಕ್ಕವಂಮಾಡಲು ಆ ಲೆಕ್ಕಕ್ಕೆ ಸರಿಯಾಗಿರಲು ಆ ಮರದಲ್ಲಿ ವಾಸವಂಮಾಡಿಕೊಂಡಿರ್ದ ಶನಿರಾಜನು ಕಂಡು ಇಳಿದುಬಂದು ಸ್ತುತಿಸುತಿರ್ದನು.

ಜಂಪೆ ॥ ನಳರಾಜನನುಸರ್ಪಕಚ್ಚಿದಾವಿಷವೆಲ್ಲ । ಶನಿರಾಜನನೆಅಂಟಿಕರೀಗವಂಕಟ್ಟ್ಯು ॥೧॥ ಸೋರಸೋರನೆರಕ್ತಗಳುಸುರಿಯುತಿರಿತಾನಾಗ । ಭರದಿಬಂದನುಶನಿಯುನಳನಿಗೆದುರಾಗೀ ॥೨॥ ಕರಗಳನುಮುಗಿದಾಗನೆರವಪತಿಯುಸ್ತುತಿಮಾಳ್ಪ । ಪರಿಯನೆಲ್ಲವಪೇಳ್ವೆಹರುಷದಿಂಕೇಳಿ ॥೩॥

ವ ॥ ಇಂತೆಂದು ಶನಿರಾಜನು ನಳರಾಜನೊಡನೆ ಇಂತೆಂದನೂ.

ಏಕತಾಳೆ ॥ ಹರಿಭಕ್ತನಾದವನೆಧೊರೆಗಳಕುಲೋದ್ಧಾರ । ಸರಸೀಜಭವಧ್ಯಾನತುಷ್ಟಾವಧಾನ ॥೧॥ ಶನಿರಾಜನೊರಾನುನಿನಗೆತಪ್ಪುಮಾಡ್ಡಿದೆ । ಇನಿತುಬಾಧೆಗಳೆಲ್ಲಪಡಿಸಿದೆನಿನ್ನಾ ॥೨॥ ನಾನುನಿನ್ನಯಬಳಿಗೆಬರುವಾಗನೇವೆಂದು । ತಾನುಪೇಳಿದನನ್ನ ಪೋಗಬೇಡೆಂದು ॥ ಆತಹೇಳಿದಮಾತುಕೇಳದೇನಾಬಂದು । ರೀತಿಯಿಂದಲಿನಿಮ್ಮಕಷ್ಟ

ರೆಪಿಡಿವಂ ॥೪॥ ಘೋರಕಾನನದೊಳುಊರ್ವರಶೇರಿಸಿ । ಗಾರುಕೆತ್ತಲೆಮಾಡಿಬ್ಯಾರಿರೀಶ ॥೫॥ ಕೆಡುತಪ್ಪುಮಾಡಿದೆಕಮಲಾಪ್ತನಂದನನಿಮ್ಮ । ಮಡದಿಪತಿವ್ರತೆಧರ್ಮಾಧರ್ಮವರಿಯದಾದೆ ॥೬॥ ಭುವನದೊಳಗೆನಿಮ್ಮಸತ್ಯವ್ರತಕೆಹೆದರಿ । ತಲೆನಿನ್ನಅಭಯವಬೇಡುವೆನೀಗಾ ॥ ೭ ॥

ವ ॥ ಇಂತೆಂದು ಶನಿರಾಜನು ನಳರಾಜನೊಡನೆ ಹೇಳಿ ಮತ್ತಿಂತೆಂದನು.

ತ್ರಿಪುಡೆ ॥ ವಸುಧೀಶರಾತುಪರ್ಣನೆಡೆಯೊಳುನೀವುಚಾಕರಿಯಿಂದಲಿರುತಿರೆ । ಕುಶಲದಿಂಕೆರಸುವರೆಬಂದುತಂತ್ರದಿಂದಾ ॥೧॥ ಎರಡನೆಯಕಲ್ಯಾಣವೆನುತಲಿಹೇಳಿನಿನ್ನಯಕರೆಸಲೋಸುಗ । ಕರದುಮಾಡಲಿಬ್ಯಾಡಕೇಳ್ಳೈಪಾರ್ಥಿವೇಂದ್ರಾ ॥ ೨ ॥ ಅದುನಿನಗೆತಪ್ಪೆಂದುಈಗಲುಹೃದಯದೊಳಗೆಇರಿಸದೆ । ಮುದದಿನೀಪುಷ್ಕರನ ಗೆಲಿದುನಿನ್ನರಾಜ್ಯವೆಲ್ಲಾ ॥೩॥ ಸಕಲಸಂಪತ್ತಿನಲಿನೀನಿನ್ನಸುಖದೊಳಿರು । ನಿನ್ನರೂಪನುಬರುವರೆಕಕೋಟಕನಿತ್ತವಸ್ತ್ರವುನೀನುಪೊದಿಯೆ ॥ ೪ ॥ ಎಂದಿನಂದದಿರೂಪುಬರುವದುಚಂದದಿಂದಾರಾಜ್ಯವೆಲ್ಲವು । ಇಂದುಧರನಾಕರುಣದಲಿನೀಪಾಲಿಸೆನುತ ॥ ೫ ॥ ವರವನೀವೆನುಭರದಿಕೇಳ್ವಿದುಕರುಣದಿಂಶನಿರಾಜಕೇಳಲು । ಭರದಿಂದನಳರಾಜಕೇಳಲುಹರುಷದಿಂದ ॥೬॥ ಕರವಮುಗಿಯುತನಿಂದುರಾಯನು ವರವಬೇಡುವಪರಿಯನೆಲ್ಲವ । ನೊರವೆಕೇಳ್ಳೈಭೂಪನೀನಿನ್ನುಹರುಷದಿಂದ ॥೭॥

ವ ॥ ಇಂತು ನಳರಾಜನು ಸ್ತುತಿಸುತಿರ್ದನದೆಂತೆನೆ.

ದ್ವಿಪದೆ ॥ ಪಂಕಜಹಿತಪುತ್ರಪರಮಪವಿತ್ರ । ರಂಕಿನಿನನ್ನಾಕೆಸುಯಕೊಲ್ಲುವಿರಿ । ಧರಣಿಯೊಳುನನ್ನನುಸ್ತುತಿಮಾಡಿದವರ । ಗೋಡವೆಬಾರದಹಾಗೆವರನೀವುದೆಂದು । ಇನ್ನೊಂದುಬೇಡುವೆನುಚನ್ನಾಗಿಕೇಳು । ಹರುಷದಿಂದೆನ್ನಚರಿತೆಯನೋದಿದವರ್ಗೆ । ಕೇಳಿದವಗ್ಗೆನೀವುಕಾಡದಹಾಗೆವರವೀಯ್ಯಬೇಕು । ಕರದಿಂದಬರುವರಕಾಡದನೀವು । ಸತತವುಕಾಡದೇವರವೀಯ್ಯಬೇಕು । ಈವೃಕ್ಷದೊಳಗೆನೀನಿರುವಪ್ರತಿಶಯದಿ । ವರವಂದುಪಾಲಿಪುದುಸರಸದಿಂನೀವು । ಇಂತುನಾಬೇಡಿದವರಗಳನುಈಗ । ಸ್ವಂತದಿಂದಯಮಾಡಬೇಕುಎಂದನಲು ।

ಶನಿರಾಯಕೇಳಿಸಂತೋಷದಿಂದಾಗ। ಇನಿತುವರಗಳನಿನಿಗೀವೆನಿ
ನಗೀಗ। ಆಯುಷ್ಯೈಶ್ವರ್ಯಅತಿಶುಭಗಳಿಂದ। ಆರಾಯಪುಷ್ಕರನಗೆ
ಲಿದುನೀನಿನ್ನ। ಸುಖದಿಂದಬಾಳೆಂದುವರವಿತ್ತು । ಸೂರ್ಯನಸುತ
ನುಶನಿರಾಯತಾನಿನ್ನುಬಿಡದೆ । ಆತಾರೆಯಮರದೊಳಗೆ ಅತಿಶಯ
ದೊಳಿರ್ದ ॥ ಕಂದ ॥ ಎಲ್ಲಿಯುಅವೃಕ್ಷವಿರುತಿರೆ। ಅಲ್ಲಿಯುತಾನಿ
ರುವಶನಿಯುಅದುನಿಜವೆನ್ನುತ। ಬಲ್ಲಂತಪ್ರಭುಗಳೆಲ್ಲರು। ಈಸು
ದ್ದಿಯತಾವುಕೇಳಿನಿಲ್ಲದೆಪೋಪುದು ॥

ಸಾಂಗತ್ಯ ॥ ಅನಿತರೊಳ್ನಳರಾಜಘನಹರುಷದಿಂದಲಿ। ಶನಿರಾ
ಜಗೆಕರವಮುಗಿದೂ ॥೧॥ ಕ್ಷಣದೊಳಪ್ಪಣೆತೆಗೆದುಕೊಂಡು। ರುತು
ಪರ್ಣನಬಳಿಗೆಬಂದನುನಳರಾಜಾ ॥ ೨ ॥ ಬಂದಬಾಹುಕನಭಾವವ
ನೋಡಿ। ರುತುಪರ್ಣಇಂದುನಾನಿದುನಿನಿಗೆಪೇಳ್ದ ॥೩॥ ಅಂದದಿಂ
ದೀವಿದ್ಯೆನನಿಗೆನೀಪೇಳೆಂದು। ಚಂದದಿಂಕೇಳ್ದರುತುಪರ್ಣ ॥೪॥ ಎಂ
ದವಾತನುಕೇಳಿಬಾಹುಕಪೇಳ್ದನು। ಅಂದುತಾಕಲಿತವಿದ್ಯೆವನು ॥
ಚಂದದಿಂರುತುಪರ್ಣಪೇಳ್ದತನ್ನಯವಿದ್ಯೆ । ಮುಂದಕ್ಕೆತೆರಳಿದಾ
ರಾಗಾ ॥೬॥ ಅನಿತರೊಳ್ತುರಗಾವುಅನಿಲನಂಬರಕೆನೆಗಸಿ । ಘನ
ಕಾರದಾರ್ಭಟೆಯಿಂದಾ ॥ ೭ ॥ ಮಿಸುನೀಯರಾತನೆಗಾಳುಎಸವಕೋ
ಟೆಯಬಳಿಗೆ । ಕುಶಲದಿಂಶೇರಿದಾರಾಗಾ ॥೮॥ ರಥಗಾಳಧ್ವನಿಯಲಾ
ಲಿಸಿಕೇಳಿ। ದಮಯಂತಿಅತಿಶಯದಿಂದವೇಳ್ಮನೆಯ ॥೯॥ ತುಪ್ಪಯ
ವ್ಯಾಲಿತಾಬಂದುನೋಡುತಲಿರುತಿರ್ದ । ಮುದದಿಂದನುಡಿದಾಳು
ತಾನೂ ॥೧೦॥ ಇಂತುಈವೇರಿರಥವನಡಸುವನ್ನ। ಕಾಂತಾನಲ್ಲದೆ
ಮತ್ತೊಬ್ಬನಲ್ಲಾ ॥೧೧॥ ಪಂಥಪ್ರತಾಪಬರುಪ್ಪೊದಿಲ್ಲಾಎಂದಾಗ।
ದಂತಿಗಮನೇಪೇಳ್ದಳಾಗ ॥೧೨॥ ಸ್ವಾಂತಾದಿಂನೋಡಿಶೋಕವುಎಂ
ಜೊನದಿಯೊಳು । ದಂತಿಗಮನೆಮುಳುಗಿದಾಳೂ ॥೧೩॥ ಆಗಲಾರು
ಷಿಗಾಳುಪೇಳ್ದಪ್ರಕಾರಕ್ಕೆ । ಸಾಗಿತುಂಬಿತುಮೂರುವರುಷ ॥೧೪॥ ಅ
ನಿತರೊಳ್ದಮಯಂತಿಪಿತನಬಳಿಗೆಪೋಗಿ। ಘನದಿಂಪತಾಪೇಳ್ದಳಾ
ಗ ॥೧೫॥ ತಾತಕೇಳು ಋತುಪರ್ಣನಾತಾನರಥವನ್ನು । ನೋಡುನಿದಿ
ದನಡಸುವನೂ ॥೧೬॥ ಎನ್ನಾರಮಣನಾದರಿಇನ್ನುಈಕ್ಷಣವೆ । ವಂ

ತ್ರಿಮಾನ್ಯೆಯರಕರೆಕೊಂಡೂ ॥ ೧೭ ॥ ಎಮರಾಗಿಪೋಗಿನ್ನು ಆವರ ನ್ನು ಕರೆಕೊಂಡು । ಬಂದುಬಿಡದಿಮಾಡಿಕೊಡಿಸು ॥೧೮॥

ವ ॥ ಇಂತೆಂದ ಮಗಳಮಾತಿಗೆ ಮಂತ್ರಿಮಾನ್ಯರು ಒಡ ಗೊಂಡು ತಾಳ ಮ್ಯಾಳ ನಗಾರಿ ನೌಬತ್ತಿನಿಂದಾ ಸಕಲರಾಣಿಮೆಸ ಹ ಎಮರುಗೊಂಡು ಪೋಗಿ ಕರದುಕೊಂಡ ಬಂದು ಬಿಡದಿಯಂ ತೋರಲು ರುತುಪರ್ನನು ಆ ಬಿಡದಿಯೊಳಗಿರುತಿರ್ದನದೆಂತೆನೆ.

ಜಂಪೆ ॥ ಭೀಮರಾಯನುತನ್ನ ಮಗಳೊಡನೆ ಈವಾರ್ತೆ । ತಾಮ ಸಾವಿಲ್ಲದೆಹೇಳ್ದನಾಕ್ಷಣವೆ ॥೧॥ ಹೇಳಲಾಕೆಯುತನ್ನ ಪ್ರಾಣಸಖಿಯಂ ಕರೆಸಿ । ಪೋಗಿನೀಂವೀಕ್ಷಿಸೀಆಧೋರಿಯುಬಳಿಗೆ ॥ ೨ ॥ ಅಲ್ಲಿವಿನ್ನಯರ ಮಣಿಮಾರುರೂಪುಗಳಿಂದ । ಶೇರಿಸಾರಥಿತನವಮಾಡುತಿಲ್ಲಿಹನೂ ॥ ಅವನೆಡೆಗೆನೀಂಪೋಗೀವನೊಡನೆಮಾತಾಡಿ । ಅವನರೂಪನುನೋ ಡಿಹರುಷದಿಂಬಹುದು ॥೪॥ ಎಂದಮಾತನುಕೇಳಿಇಂದೀವರಾಕ್ಷಿಯು ರು । ಚಂದದಿಂಪೋದರಾಧೋರಿಯುಬಳಿಗಾಗ ॥೫॥ ಪೋಗೀತನಬ ಳಿಗೆಸೊಗಸಿಂದಬಾಲಿಯುರು । ಶೋಧಿಸುತಕಂಡರಾಮಿಗೆರೂಪಿನವ ನಾ ॥೬॥ ಅಡಿಗೆಯನುಮಾಡುತಿರೆಬಿಡಗನೆಲ್ಲವಕಂಡು । ಕಡುನಗು ತಹತ್ತಿರಕೆಶೇರಿಕೇಳಿದರು ॥೭॥ ಇವನೆಬಳಿಯುಲಿನಿಂತ:ಎಷ್ಟುವರುಷ ಗಳಾಯ್ತು । ಈಗನಿಮ್ಮಹೆಸರೇನ ಪ್ರೇಮದಿಂಹೇಳಿ ॥ ೮ ॥ ಎಂದ ಮಾತನುಕೇಳಿಚಂದದಿಂಬಾಹುಕನು । ಆಮುದಗಮನೆಯೊಳುಇಂ ತೆಂದನಾಗಾ ॥೯॥ ಮಾನುನೀಮಣಿಕೇಳುಮನೆಹರುಷದಿಂನೀವು ನಾ ನುಬಾಹುಕನನ್ನ ಹೆಸರುಎಂದಾ ॥೧೦॥ ಎಂದಮಾತನುಕೇಳಿಸಂ ದೇಹವನುಬಿಟ್ಟು । ಇಂದೀವರಾಕ್ಷಿಯರುಇಂತೆಂದರಾಗಾ ॥೧೧॥ ನ ಳರಾಜನಲ್ಲವೆಬಳಿಕರುತುಪರ್ನನಾಬಳಿಯುಲಿರೆ । ನಿನ್ನವಾರ್ತೆಯ ಕೇಳಿದಮಯಂತಿ ॥ ೧೨ ॥ ಧೊರೆಭೀಮರಾಯನುಕರಸಲೋಸುಗನಿ ಮ್ಮ । ನರಸಿಜಾನನೆಗೆಸ್ವಯಂವರವೆರಡುಎಂದೂ ॥೧೩॥ ಹೇಳಿಕರ ಸಲುನೀವುತಾಳದಿರಿಕೋಪಗಳು । ಮ್ಯಾಳದಲಿನಿಮಗೆಈರೂಪಲ್ಲಿಬರ ತೂ ॥೧೪॥ ಇಂತುವೇಷಗಳಿಂದನ್ನರಂತದಿಂದೀನೃಪನ । ಬಳಿಯುಚಾ ಕರಿನಿಮಗೆಇನಿತ್ಯಾತಕ್ಕೆಮ್ಯಾ ॥೧೫॥ ಈರೂಪುನಿಮಿಗೆಲ್ಲಿಶೇರಿಸಂ

ಗೃಹಿಬತು । ಧೀರನೆಮ್ಮನುಕಾದಪಾದಯಂತಿಪೇಳಿ ॥೧೬॥ ಕಳಹಿದೆ ನಾವುನಿಮ್ಮಬಳಿಗೆಬಂದೆವು । ಈಗಣಿಳೆಯಭೋಗಕೆನೀವುಘಳಿಲನೇ ಬಹುದೊ ॥೧೭॥

ವಚನ ॥ ಸಚಿವರು ಮತ್ತಿಂತೆಂದರು.

ಏಕತಾಳೆ ॥ ಅರಣ್ಯಭೂಮಿಯೊಳ್ಬಿಟ್ಟುಪೋದಂದಿರದೆ । ಅನಾರಿ ದುಃಖದೊಳ್ಕರಗುತ್ತಲಿಹಳು ॥೧॥ ದಮಯಂತಿಮಾಡುವದುಃಖ ವೆಲ್ಲವುನಾವು । ಕ್ರಮದಿಂದಹೇಳ್ವೆವುಕರುಣದಿಂಕೇಳು ॥ ಅನ್ನಾವ ನೊಲ್ಲದೆವಸ್ತ್ರವಕೇಳ್ಳದೆ ॥ ತಮ್ಮಕಾದವನೆನದುತಾನುದುಃಖದೊ ಳು ॥೪॥ ಸತಿನಿತ್ಯವೆಲ್ಲಾ ವುತಲ್ಲಣಗೊಳುತಲಿ । ನಿಮ್ಮಧ್ಯಾನಾವತಾ ನುಮಾಡುತ್ತಲಿಹಳು ॥೫॥ ಒಂದುದಿವಸವಿನ್ನು ಬಂದುನಿಮ್ಮಾಯ ಮಾವ । ಚಂದದಿಂಬಾಹಪೇಕ್ಕೆ ಬರಲಿಲ್ಲಾ ॥ ೬ ॥ ಅನ್ನನೀರನುಬಿ ಟ್ಟುನಿಮ್ಮಚಿಂತೆಯೊಳಿಹ ।ಇನ್ನಾ ನಿಮಗೆಸತಿಯಚಿಂತೆಗಳಿಲ್ಲಾ ॥ಮ ಕ್ಕಳನೆನೆದಾಗಮಡದಿಯನೆನೆಯದೆ । ತಕ್ಕದ್ದಲ್ಲಾನೀವುಸಿಕ್ಕಿರಿ ರುವಾದು ॥೮॥ ಧರಣಿಯೊಳ್ನೀವಿನ್ನುಘೋರಅರಣ್ಯದಿ । ತರುಣಿ ತಾನುಟ್ಟದ್ದಸೀರೆಯಹರಿದು ॥೯॥ ಪೋದಾಗಲಿಂದಾಸತಿಯುಮೋ ದಗೆಟ್ಟನ್ನು । ಮೊದಲುತಾನುಟ್ಟಸೀರೆಯೊಳಗೆಇರುತಿಹಳು ॥೧೦॥ ಮಕ್ಕಳನೋಡಿನೋಡಿದುಃಖದಿಂಕರಗುತ್ತ । ಇಹಳುಕೇಳ್ನೀಹಿಲ್ಲಿಇ ದುಸಲ್ಲದೈಯ್ಯಾ ॥೧೧॥ ನಡತೆಯಿಂದಲಿಬಂದುನಗರಿಯಹಾದೆ । ಕಡುಕಷ್ಟಪಡುವಂತಕಾರ್ಪಣ್ಯವ್ಯಾಕೆ ॥೧೨॥ ನಿಮ್ಮಮಾವನುನಿ ಮ್ಮಅತ್ತೆಯುಸತಿಯನು । ನಿಮ್ಮಮಕ್ಕಳಬಿಟ್ಟುಇಲ್ಲಿರುವದ್ಯಾಕೆ ॥ ತರುಣಿಮಾಡಿದತಪ್ಪುವಿವರದಿಂಕೇಳಿದೆವು । ಸುದರನ್ನುಬಿಟ್ಟನಿಮ್ಮ ಕರವನ್ನುಪಿಡಿದ ॥೧೪॥ ತಪ್ಪುಯಿದೊಂದಾದ್ಯೂತ್ತಇನ್ನೊಂದಹೇ ಳುವೆನು । ಸಪಾಶಯನಭಕ್ತಲಾಲಿಸಿಕೇಳೊ ॥೧೫॥ ಅರಣ್ಯದೊಳು ನೀವುತರುಣಿಯಬಿಟ್ಟುಪೋಗೆ। ಅನಾರಿತನ್ನಯತವುರುಸೇರಿದಳೊ। ಸಕಲಶಾಸ್ತ್ರವುಬಲ್ಲಸುಗುಣಾರುನಿಮಗಿನ್ನು ಸರೀ । ರಕಲ್ಲುಗಳುಮಾ ಡಿಯಿರಬಹುದೆಜಗದೀ ॥೧೭॥ ಸತಿಗಿನ್ನು ಎರಡನೇಕಲ್ಯಾಣವೆಂದೀ ಗಕರಬೇಡುವೀಗ । ನಿಮ್ಮಾಕೋಪಬ್ಯಾಡ್ದೈಯ್ಯಾ ॥೧೮॥ ನೀವುಬಾ

ಹುಕೆಂದುಈತೆರದಿನಮ್ಮಧೊರೆಯು । ಈಯುಪಾಯಮಾಡಿ ಕರೆಯಕಳುಹಿದಾರು ॥೯॥ ಅವನೀಶಾನಿಮ್ಮಧೊರೆಗೆನಿಮ್ಮಮೇಲೆಕೋಪವಿಲ್ಲ । ಶಿವನಾಣೆನಮ್ಮಕೂಡನೀವುಬರುವದು ॥

ವ ॥ ಇಂತೆಂದು ಸಖಿಯರಂ ನೋಡಿ ಬಾಹುಕನಿಂತೆಂಬನೂ.

ಆಟತಾಳ-ಅರ್ಧರೇಖು ॥ ಹೋಗೋಗಿನಿಮಗಿದುಬುದ್ಧಿಗಳಿಲ್ಲಾಸ್ತ್ರೀಯರಾರುನನ್ನಾನುನೋಡಿಭ್ರಮಿಸುವರೆ । ನಳನೆಲ್ಲಿನಾನೆಲ್ಲಿವನಿತೆನನ್ನ್ಯಾಕೆಕರೆಯಕಳುಹಿದಳುನನ್ನಹೆಸರುಬಾಹುಕಾನು । ಋತುಪರ್ನನೆಂಬೊಧೊರೆಗೆಸಾರಥಿನಾನು । ನಳನನೊಲ್ಲೆನುಎಂದುವನಿತೆಈಧೊರೆಯು । ಕರಸಿದಾಗಲೆಇನ್ನಕಾಂತೆನಿನ್ನಾಕೆ । ಅವನಇನ್ಯಾತಕೆಅರಸುವರೆಂದು । ಅವನುಶಿಗ್ಗಿಲ್ಲದೆಬರುವೋನೆಇನ್ನು । ಅರಣ್ಯದೊಳುಬಿಟ್ಟುಪೋದಂತನಳನಾ । ಅನಾರಿಯಹಾತಕನೆನೆದುಚಿಂತಿಹಾಳು । ನಳರಾಜನನ್ನುನೋಡಿಬಾರೆಂದುನಿಮ್ಮಾ । ಕಳುಹಿದರೆನೀವುನಮ್ಮಾಬಳಿಗೆಬರಬಹುದೆ । ಬಲವಂತಾನಾದವನುಋತುಪರ್ನನೀಗಾ । ಅವನಬಳಿಗೆಕರೆಯಕಳುಹೆನಿಮ್ಮೊಡತಿ । ಕರೆಯಕಳುಹಿದಳೀಗಬರಹೇಳೀವನಾ । ಇಂತಕ್ರೋಧಗಳನ್ನುಪುಟ್ಟಿಸಬಹುದೆ । ಆದರೇನಾಯ್ತುಅಥವನೆಮ್ಮೊಡನೆ । ಈಮಾತುಗಳುನಾನುಸುಮ್ಮನೇಪೇಳ್ದೆ । ಸುದತಿಕೇಳೀಮಾತುತಪ್ಪೆನ್ನಬ್ಯಾಡಿ । ನಳನುನಾನಲ್ಲನನ್ನಹೆಸರುಬಾಹುಕನು ॥

ವ ॥ ಇಂತು ಪೇಳಿದ ಬಾಹುಕನೊಡನೆ ಸಖಿಯರು ಇಂತೆಂಬರು

ಝಾಲಪದ ॥ ಮರೆಮಾಜೇಇಂತಾಮಾತೂ । ಆಡೂವಾರನೀವೂಈಗಾ । ಸರಸಿಜಾಕ್ಷೀನುಡಿದಾತಪ್ಪುಗಳ.೦ । ಎಲ್ಲಾನೀಮರೆತೋನಿಮ್ಮನುತೆರಾನನೋಡುವರೆಬನ್ನೀ ॥೧॥ ನಳರಾಜನಾನಲ್ಲಾವೆಂದು । ಸುಳ್ಳುಮಾತಾನಾಡಬಹುದೆ । ಇಳೆಯಪತಿಯಋತುಪರ್ನಾನಸಾರಥಿಯಾಗಿ । ಮತ್ತೆಚಾಕರಿಯೊಳಗೆಇರುತಿರಲು ॥೨॥ ಮೊದಲುದಮಯಂತೀಯೊಡನೆ । ಮುದದಿಋಷಿಗಾಳುಹೇಳ್ದಾರಂತೆ । ಚಂದದಿಂದಾನಿಮ್ಮಾಕರಸುವರೆಲಿಪಮಂತಿ । ತಂದೆಗೆಪೇಳ್ದಾಳುಇಂತೆಂಬ ಋತುಪರ್ನಕರೆಸಿದರಿನ್ನು । ಎನ್ನಾಪತಿಯೂಕೂಡಾಬರುವ । ಎನ್ನಯುತ್ತೀಕೆಳುಹೂಎಂದಾಳೂ । ಕಳುಹಿದಾನದಕ್ಕೆ । ಸತಿಯಮ್ಮಾ

ಳಿನಿಸಿಗೆತಪ್ಪಾಯಿತೆ ॥ ೪ ॥ ಇಂತಾಮಾತಿಗೆನೀವುಇನ್ನು । ಕಾಂತೆ
ಮ್ಯಾಲೆಕೋಪವತಾಳಿ । ಮತ್ತೆನಾನಾಮಾತುಕೇಳಾಡಿದಿರಿ । ನ್ಯಾ
ಯವಲ್ಲೆಂದುಮತ್ತೆಪೋದಾರುದಮಯಂತಿಬಳಿಗೆ ॥೫॥ ಇಂತೂ
ಆತನುಹೇಳಿದಮಾತು । ಕಾಂತೆಯೊಡನೆಹೇಳಿದಾರು । ದಂತಿಗಮ
ನೆಕೇಳಿಆಗಾಲೆ । ಆಸಖಿಯಾರೊಳು । ಎನ್ನಕಾಂತಾನಾತಾನೆಂದಾ
ಳೊ ॥ ೬ ॥ ತನ್ನಾಮನಸಿನೊಳಗೆಇನ್ನುತಾನೂ । ಸಂತೋಷಗಳಾ
ಮಾಡಿ । ಕನ್ನಿಕಾಮಣಿಮತ್ತಿಂತೆಂದಾಳೊ । ಸುದತಿಯರೊಡನೆಇ
ನ್ನುನೀವೂಪೋಗಿಅವತೆಗೆ ॥೭॥ ಎನ್ನಾಪತಿಯೂಮಾಡೋಅಡಿಗೆ।
ವಿವರದಿಂದಾತಿಳಿದೂನೀವು । ಬನ್ನಿರೆಂದೊಪೇಳ್ದಾಲಾಕ್ಷೋಣಿ । ಆಸು
ದತೀಯರು । ತಾವುಪೋದಾರುಬೇಗಾಅಲ್ಲಿಗೇ ॥೮॥

ವ ॥ ಇಂತು ಆ ದಾದಿಯರು ಬಾಹುಕನು ಮಾಡುವ ಅಡಿಗೆ ಬಿ
ಡದಿಗೆ ಪೋಗಿ ಅಡಿಗೆಯ ವಿಸ್ತಾರವನ್ನು ನೋಡಿ ವರ್ಣಿಸುತ್ತಿ
ರ್ದಾರದೆಂತೆನೆ.

ಸಾಂಗತ್ಯ ॥ ಆತಾನುಮಾಡುವಅಡಿಗೆಯವಿಸ್ತಾರವ । ರೀತಿ
ಲ್ಲನೋಡುತಾರೀ ॥೧॥ ವಲೆಯೊಳುಸೌದೆಯಇರಿಸಿಯಜ್ಞೋಶಾನೆ ।
ಘಳಿಲಾನೆಸ್ತುತಿಸೆಅಕ್ಷಣಾದಿ ॥ ೨ ॥ ಹರುಷಾದಿಅಗ್ನಿಯೂವುರಿಸುತ್ತ
ತಾನಾಗಾ । ಅಡಿಗೆಮಾಡುವಸೊಬಗಾನೂ ॥೩॥ ಅನ್ನಹೆಸರುತಾಳ್ದ
ಪರಮಾನ್ನವು । ವುನ್ನಂತಕರ್ಜಿಕಾಯಿಗಳುಇನ್ನುನಾನಾಬಗೆಮಬ್ಬ
ಟ್ಟುವಡೆಗಳು । ಹಪ್ಪಳಅತಿರಸಗಳನೊ ॥ ೪ ॥ ಹಪ್ಪಳಅತಿರಸವ
ಪ್ಪದಿಂಕಜ್ಜಾಯ । ತಪ್ಪಾದೆವುಪ್ಪಿನಕಾಯಿಹಾ ॥ ೬ ॥ ಹೂರಿಗೆಗಾರಿಗೆ
ಹುಂಡಿಗೆಸಂಡಿಗೆ । ಪೇಣಿವಲಾದಕಾಯಿತಾಳ್ದಗಳು ॥ ೭ ॥ ದಾದಿಯ
ರುನೋಡಿಸಂತೋಷಪಡುತಲಾಗ । ಯಾರಿಗೆಸಾಧ್ಯವೆಂದೆನುತಾ ॥
ಎಂದಾರುಸತಿಯರುಬಂದುಕಾಅಡಿಗೆಯು । ಇಂದುಮುಖಿಯರಿಗೆಸು
ದಳವು ॥೯॥ ಇಂತುತಾಮಾಡುವಅಡಿಗೆಯವಿಸ್ತಾರ । ನೊಬ್ಬಸ್ತ್ರೀ
ಯರುತಾವಾಗ ॥೧೦॥ ದಂತಿಗಮನೆಗೆಈವಾರ್ತೆಯುಹೇಳಲು । ಕಾಂ
ತೆತನ್ನಯರಮಣನೆಂದು ॥೧೧॥ ಮತ್ತೆಸ್ತ್ರೀಯರಕರೆದುಇಂತೆಂದ
ಳಾನೇಪಿ । ಸಖಿಯರಾರನೀವುಪೋಗಿನ್ನು ॥೧೨॥ ಆತಾನುಮಾಡುವ

ನ್ನಹೆಸರುಗಳನು। ರೀತಿಯಪರಮಾನ್ನಗಳನೊ ॥೧೩॥ ಈಕ್ಷಣವೆನೀ
ವುತಕೊಂಡುಬರುವದೆಂದು । ಶಶಿಮುಖಿಯರಾರಕಳುಹಿದಳೊ ॥೧೪॥

ವ॥ ಇಂತು ದಮಯಂತಿ ದಾದಿಯರಂ ಕಳುಹಲು ಆ ಸಖಿಯ
ರು ಆ ಬಾಹುಕನಬಳಿಗೆ ಬಂದು ಏನೆನ್ನುತಿರ್ದರೊ.

ಜಂಪೆ॥ ಸಾರಥಿಯತನವಾಳ್ವಸವಾರನನುಕಂಡು । ಶೇರಿಇಂತೆಂ
ದರಾಸಖಿಯರಾಕ್ಷಣದೀ ॥೧॥ ನಮ್ಮರಮನೆಯೊಳಗೆಬಬ್ಬವನಿತೆಯು
ತಾನು । ಪರಮನೆಯಅನ್ನಕ್ಕೆಬಾದೆಸುತಿರುತಿಹಳೊ ॥೨॥ ಅದರಿಂದ
ನಾವುನಿಮ್ಮಯಬಳಿಗೆನಾವುಬಂದೆವುನಿಮ್ಮ । ಸದನದೊಳುಮಾಡಿ
ದಅನ್ನಹೆಸರೊ ॥೩॥ ಪರಮಾನ್ನಮುಂತಾದಪರಿಪರಿಯದಿನಸುಗಳು।
ಕರುಣದಿಂದಲಿಕೊಡಬೇಕುನೀವೆನಲೊ ॥೪॥ ನೀವುಮಾಡಿದಅನ್ನಹೆ
ಸರುಬಹುರುಚಿಕರವು । ತಾವುಈಗಲುಏಮಗೆಸ್ವಲ್ಪದಯಮಾಡಿ ॥
ದಯಮಾಡಿದರೆನಮ್ಮದಮಯಂತಿಯಸುತರು । ಸವಿನೋಡುವರು
ತಮಿಗೆಬಹುಪ್ರಸಾದವೆಂದೆನುತಾ ॥೬॥ ಈಗನನಿಗಿಷ್ಟನ್ನುಬೇಗದಿಂ
ಕೊಡಿಎಂದು । ಆಗವನಿತೆಯಕೇಳಿಅದಕೆನಸುನಗುತಾ ॥೭॥ ತಾನು
ಮಾಡಿದಅನ್ನಹೆಸರುಪರಮಾನ್ನಗಳು । ಶೀಘ್ರದಿಂದಾಗಲಿಕೊಟ್ಟುಕ
ಳುಹಿದಾಕ್ಷಣವೇ ॥೮॥ ಸಖಿಯರಾಗಲುತಂದುಕೊಡಲುದಮಯಂತಿ
ಗೆ। ಶಶಿಮುಖಿಯುಹಸನಾಗಿಮುಖಮಜ್ಜನವಮಾಡಿ ॥೯॥

ವ॥ ಇಂತು ನಳರಾಜನು ಅಡಿಗೆಯುಮಾಡಿದ ಅನ್ನಹೆಸರುಪರ
ಮಾನ್ನಗಳನ್ನು ಸಖಿಯರು ತಂದುಕೊಡಲು ಆ ಅನ್ನದಿವ್ಯಪರಿಮ
ಳಗಳಿಂದ ಇರುತ್ತಿರಲು ಕೆಲವುಮಕ್ಕಳಿಗೆ ಬಡಿಸಿ ಕೆಲವುದಾದಿಯ
ರಿಗೆ ಬಡಿಸಿ ತಾನು ಕೆಲವುಬಡಿಸಿಕೊಂಡು ಈಗನನಗೆ ಪ್ರಸಾದಲು
ದೊರಕಿತೆಂದು ತನ್ನಯಮನಕ್ಕೆ ವತ್ತಿಕೊಂಡು ಭೋಜನಂಗೈದು
ಆ ಅಡಿಗೆ ರುಚಿಕರವಂನೋಡಿ ಏನೆನ್ನುತಿರ್ದಾಳು.

ಕೊರಚುಜಂಪೆ ॥ ಇಂತುಸುವಾರವಿದ್ಯಗಳಾ । ತಾನೆಲ್ಲಿಕಲಿತರೋ
ಭೋಜನಗಳಾ ॥೧॥ ನಾರಿಯರುಈತೆರದಿತಾವು । ಅವರು। ಮಾಡುವ
ರೆಇಂತಹಸದಳವು ॥೨॥ ಕಲಿರಾಜನಿಂತುಮಾಡುವ । ಅವಗೆ। ಬಳಿಕ
ನಾವೇನುಮಾಡಿದೆವೊ ॥೩॥ ಮಾಡಿದೆವೊಎಂದುದಮಯಂತಿ। ಆಗ

ನೋಡಿದಳುಸಖಿಯರಸುತಾನೂ ॥೪॥ ಇಂದುಮುಖಿಯರೆನೀವುಈ
ಗ ।ನೀವು। ಸುತರಕರಕೊಂಡ್ಹೋಗಿಬೇಗಾ ॥೫॥ ನಳರಾಜಬಳಿಗೆಎ
ನಲು ।ಆಗ। ನಳಿನಮುಖಿಯರುಬೇಗಬಿಡಲೂ ॥೬॥ ನೋಡಿದನುನ
ಳರಾಜತಾನುನೋಡಿ । ಮನದೊಳಗೆಚಿಂತೆಮಾಡಿದನು ॥೭॥ ಕಂದ
ಗಳಯೆತ್ತಿಮುದ್ದಾಡಿ ।ಆಗ। ಚಂದದಿಂದಲಿತಾನುನೋಡಿ ॥ ೮ ॥
ಮುದ್ದಾಡಿಮುದದಿಂದತಾನೂ ।ಆಗ। ವಿಧಿಗಿದುಃಖಗಳಮಾಡಿದನು॥
ದುಃಖಿಸುತಇರಲುಕಂಡಾಗ । ಆಸಖಿಯರುಅಕ್ಕರದೊಳಿಂತೆಂದರಾ
ಗ ॥೧೦॥ ನಳರಾಜನಲ್ಲದೇನೀನೂ ।ಈಗ। ಅಳುವಪರಿಸ್ಮಾತ್ರಗಳುವಿನು॥
ಪರರಮಕ್ಕಳಎತ್ತಿನೀವು ।ಈಗ। ಕರುಣದಿಂದಳುವಬಗೆಯೇನು॥
ನಾವುನಿಮ್ಮನುಬೇಡಿಕೊಳಲೂನೀವು॥ ಹೇಳಬಾರದೆಹೆಸರುಗಳನೂ ॥
ಇಂದುನೀನಾಜಿಹೇಳಿದರೆ ।ನಿಮ್ಮ। ವೃತ್ತಾಂತವನಾವರಿಯುದವರೆ॥
ಎಂದಮಾತನುಕೇಳಿತಾನು ।ಇನ್ನೊಂದು। ತಂತ್ರವನುಮಾಡಿಹೇ
ಳಿದನೂ ॥೧೫॥ ವ ॥ ಇಂತೆಂದು ಆ ಸಖಿಯರು ಕೇಳಿದ ಮಾತಿ
ಗೆ ನಳರಾಜನೇನೆನ್ನುತಿರ್ದಾನೂ. ತ್ರಿಪುಡೆ॥ ಇಂತುತಮಕ್ಕಳಿಗೆ
ಪ್ರೀತಿಯಿಂದನಿಶಿಕಾಸ್ವರುಸುತರುವನಗಿರೆ। ಕಾಂತೆಯರೆಅದರಿಂದದುಃ
ಖವುಬಂದಿತೆನಗೆ ॥೧॥ ಪರರಪಾಪವಮಾಡುವವನುಕೆಡುಕಷ್ಟಅಬ
ಜಮುಖ್ಯಾಕೆಈಗಲು। ಮನೆಬಿಟ್ಟನಾಬಂದೆನ್ನಯಸತಿಯಕೂಡೆ ॥೨॥
ಶೇರಿದೆನುನಾನಲ್ಲಿಈಗಲುಮೂರುವರುಷವುಆಯಿತಿಲ್ಲಿಗೆ ।ನಾರಿಯನು
ನೋಡುವರೆಕಳುಹನುಧಾರುಣೀಶಾ ॥೩॥ ಇಂತುಈಬದುಕನ್ನುಬಾಳು
ವದ್ಯಾಕೆಎನುತಾಈಗಲೂ ।ಚಿಂತೆಯಿಂದಲಿಮುತಮಕ್ಕಳಮುದ್ದಿಸಿ
ದನೂ॥೪॥ ನೋಡಿದರುತಾವಾಗಸಖಿಯರುಗಾಢದಿಂದಾಅಡಿಗೆಂಬ
ಮಾಡುತಿಪುರಾಣಕನಕೊಂತೆಂದರಾಗಾ ॥೫॥ ನಳಮಹೀಪತಿಸ
ನ್ನುತಿಸುತರನ್ನುತೊರದುಇಲ್ಲಿಯು । ಪರರಪಾಪವಮಾಡುತಿರು
ವುದುಕೊರತೆನಿನಗೆ ॥೬॥ ಸರ್ವರಾಜ್ಯವನಾಳ್ವರಾಯನಸತಿಯಸು
ತರೂಈಗಲೂ । ಒಬ್ಬರಾಯನಬಳಿಯೊಳಿರುವದುಮ್ಯಾಕೆಯುಲ್ಲಾ॥
ಇಂತಹಬಗೆಯಿಂದಯಿಂತಿಗೆಕಷ್ಟಪುಟ್ಟಿಪಂಥದಿ । ಚಿಂತೆಯಿಲ್ಲವೆ
ನಿನ್ನಕಣ್ಣಿಗೆನಿಪ್ರಬಂತೆ ॥೮॥ ಎಂದುಸಖಿಯರುಪೇಳಿಆಗಲುಚಿಂತೆ.

ದಿಂದಾಪೋಪಾರೂ । ಇಂದುಮುಖಿಯರುಪೇಳ್ದರಾ ವೃತ್ತಾಂತವ
ನ್ನು ॥೯॥ ವ ॥ ಇಂತು ತಮ್ಮ ವಸತಿಯುಬಳಿಗೆ ಬಂದು ಏನೆನ್ನು
ತಿರ್ದಾರೂ. ಕಂದ ॥ ನಳರಾಜನೋಡಿಮಕ್ಕಳ । ಕಳಗುಂದಿಯು
ದುಃಖದಿಂದಕೆಂಬನಿಗರೆಯುತಾ ॥ ಬಳಿಕಿನುದ್ದಿಸಿಳುತಿರ್ದುದು ।
ಪೇಳ್ದರಾಗಶಶಿಮುಖಿಯೊಡನೆ ॥೧॥ ಸಖಿಯರಿಂತೆಂದುಪೇಳಲು। ಪಂ
ಕಜಮುಖಿತನ್ನ ಮನದಿಚಿಂತೆಯುತ್ತಾಳುತ ॥ ಕಾಂತೆಯುತನ್ನಯ
ಪಿತನಿಗೆ । ಪೇಳಿದಳುವೃತ್ತಾಂತವೆಲ್ಲಕಡುಭರದಿಂದಾ ॥೨॥

ವ ॥ ಈವ್ಯಾಳೆಯಲ್ಲಿ ಭೀಮರಾಯನು ಆ ದಾದಿಯರಂ ಕರಸಿ ಅ
ಲ್ಲಿನ ವಿಘ್ನವಾನವೇನೆಂದು ಕೇಳಲು ಸಖಿಯರು ಏನೆನ್ನುತಿರ್ದಾರೂ.

ಏಕತಾಳ-ಅರ್ಧರೇಖು ॥ ಪೋಗಿಕಂಡೆವುನಾವುಹೋಗಿಬಾಯನಾ
ಲೂ। ರಾಗದಿಂದಲಿಕೊಂಡುಬೇಗದಿಂಬಂದು । ಆದಮಯಂತಿಗೇಆರ್ತಿ
ಯಿಂನಾವು । ಚಂದದಿಂಪೇಳಿದೆವುಆಇಂದುಮುಖಿಗೆ । ಎನಲುಭೀಮ
ರಾಯನಿನಯದಿಂಪೋಗಿ। ಮಗಳಬಳಿಯನಿಂತುಕೇಳ್ದನಿಂತೆಂದು॥

ವ ॥ ಇಂತು ಭೀಮರಾಯನು ದಮಯಂತಿಯುಬಳಿಗೆ ಬಂದು
ಕೇಳಲು ದಮಯಂತಿ ಏನೆನ್ನುತಿರ್ದಾಳೂ. ಏಕತಾಳ ॥ ನಳರಾಜ
ನಬಳಿಗೆನಳಿನಮುಖಿಯರಕಳುಹೆ । ತಿಳಿದೆನಾನೀಗಆತನಮಾರ್ಗವ
ನೆಲ್ಲನಾನು ॥೧॥ ಈಗನೀವೀಕ್ಷಣವೆಪೋಗಿಸಿಂಹಪೀಠಕ್ಕೆ । ರಾಗದಿಂದ
ಲಿಕುಳಿತುಆತನಕರಸಿ ॥೨॥ ಎಂದುದಮಯಂತಿಯುತಂದೆಗೆಪೇಳ
ಲು। ಚಂದದಿಂಪೋದಾನುಸಿಂಹಪೀಠಕೆ ॥೩॥ ಸಿಂಹಪೀಠದಮ್ಯಾಲೆಕು
ಳಿತುಆಕ್ಷಣದಿ। ವಸುದೇವನೆಂಬೊಬ್ರಾಹ್ಮಣನ್ನ ಕರೆಸಿ ॥೪॥ ನೀವು
ಪೋಗೀಗಾಲುರುತುಪರ್ಣನಂಕಂಡು । ನಮ್ಮಧೊರೆಈಗಾಲುಮಾರು
ರೂಪವನೂ ॥ ೫ ॥ ನೋಡಬೇಕೆನುತಲಿರೂಢಿಇಂಕಳುಹಿದ । ಗಾಢ
ದಿಂಕಳುಹೆಂದುಕೇಳಿನೀವೀಗಾ ॥೬॥ ಕರಕೊಂಡುಬರುವದೆಂದುಭರ
ದಿಂದಕಳುಹಲು । ಹರುಷದಿಂವಸುದೇವನಲ್ಲಿಗೆಪೋಗೆ ॥೭॥ ಕಂಡು
ರುತುಪರ್ಣನಮುಂದೆನೃಪತಿಈಗ । ಇಂದುನಿಮ್ಮಬಳಿಯಲ್ಲಿರುವ
ಬಾಹುಕನಾ ॥೮॥ ನೋಡಬೇಕೆಂದುನಮ್ಮರೂಢಿಯಿಂಕಳುಹಿದರೆ ।
ಗಾಢದಿಂದಲಿನೀವುಕಳುಹಿಸೆಂದನಲೂ ॥೯॥

ವ ॥ ಇಂತು ವಸುದೇವನೆಂಬೊ ಬ್ರಾಹ್ಮಣನು ಋತುಪರ್ಣನೊಳು ಈವಾರ್ತೆಯಂ ಹೇಳಲು ಋತುಪರ್ಣನು ಬಾಹುಕನಂ ಕರಸಿ ಆತನಕೊಡೆ ಇಂತೆಂದನೊ. ಸಾಂಗತ್ಯ ॥ ಬಾಹುಕಕೇಳ್ಳಿನ್ನ ಭೀಮರಾಯನು ಮತ್ತೆ । ಹೇಳಿಕಳುಹಿದಂಯೆನ್ನ ಬಳಿಗೆ ॥೧॥ ನಿನ್ನರಸುಫುಗಳನ್ನು ನೋಡಬೇಕೆನುತಾಲಿ। ವುನ್ನತದಿಂ ಕಳುಹೆಂದನು ॥೨॥ ಗವ್ವಾನೆಪ್ರೋಗಿನೀತಡವು ಮಾಡಲಿಬ್ಯಾಡ। ಶೀಘ್ರದಿಂದ್ಹಲಿನೀನು ಬಹುದು॥ ಹೇಳಿ ಆತನಕಳುಹಿತಾಳಿದ ಚಿಂತೆಯಾ। ತಿಳಿಯದಿದೇನೋ ಮಾಯುಗಳಾ ॥೪॥ ಧೊರೆಗಳೆಲ್ಲರು ಈಗ ಬರುವರೆಂದೆನುತಾಲಿ। ಕರಸೀದ ಭೀಮಾನುತನ್ನಾ ॥೫॥ ಧೊರೆಗಳೊಬ್ಬರಇನ್ನು ಪುರದೊಳು ನಾಕಾಣೆ। ಭರದೀ ಕರಸಿದ ತಂತ್ರವೇನೊ ॥ ೬ ॥ ತಿಳಿಯಬಾರದು ಈಗ ಇಳೆಯೊಳೀ ಮಾಯವು ಬಾಲಲೋಚನಶಿವ ಬಲ್ಲಾ ॥೭॥ ಎನುತಾಲಿ ಮನದೊಳು ತಲ್ಲಣಗೊಳುತಾಲಿ। ಮೆಲ್ಲಾನೆ ಮತ್ತೊಂದು ನುಡಿದಾ ॥೮॥ ಧರೆಯೊಳಗಿಂದೀಗ ಏನಡಾನೆ ಕಲ್ಯಾಣ। ಎಂದು ನಮ್ಮನು ಕರಸಿದಾನೊ ॥೯॥ ಇಲ್ಲಿ ನಾವು ನೋಡಲು ಏನು ಕಾಣೆವು। ಇದು ಏನೊ ತಂತ್ರವು ಕಾಣೆ ॥೧೦॥ ನೆನ್ನೃಪ ಕರಸಾದೆ ನಮ್ಮಾಳನ್ನು ಕರಸಿದಾ। ಬಗೆಯೇನೊ ತಿಳಿಯದು ಎನಗೆ ॥೧೧॥ ವ ॥ ಇಂತು ಭೀಮರಾಯನ ಬಳಿಗೆ ಬಾಹುಕನ ಕರಕೊಂಡು ಪೋಗುತ್ತಿರಲು ಆ ಪುರಜನರು ಏನೆನ್ನುತಿರ್ದಾರೊ.

ಯಾಲಪದ ॥ ಸಖಿಯರೆಲ್ಲಾ ಗುಂಪುಗೂಡಿ। ಅಕಟಾ ಘೋರಾರಣ್ಯದೊಳಗೆ। ಸುಖದೊಳಿರ್ದಾ ಸತಿಯ ಬಿಡಬಹುದೆ। ಆ ಪುರದಾ ಜನರು। ಸಕಲರೆಲ್ಲಾ ಆಡುತಿರ್ದಾರೊ ॥೧॥ ಇಂದ್ರಾದಿ ಮುನಿಪರುಣಾರು ಎಲ್ಲಾ। ಅಂದು ಧನಪತಿ ಸಹಿತಾ ಬಂದೂ। ಚಂದದಿಂದಾ ಯಿಂತಿಯ ಕೇಳುವರೆ। ಅಂತವರಾ ಬಿಟ್ಟು। ಯಿಂದುಮುಖಿ ಯತನ್ನ ಮದುವೆಯಾಗಲ್ಕೆ ॥೨॥ ಮೋಸವ ಮಾಡೀದ ಮಯಂತಿಯ। ಅಡವಿಯೊಳಗೆ ಬಿಟ್ಟೊತ್ತಾನು। ದೇಶದೊಳಗೊಂದು ನಗರಾ ಶೇರಿದಾ। ಆಶೆ ಇಲ್ಲಾ ಹೆಲೇ ಬಿಡೆಲ್ಲಾವೆಂದು ನುಡಿದಾನೊ ॥೩॥ ಈಶಾನಂತಾನಾಗಲಿನ್ನು। ಹಿಮಗಿರಿಯೊಳಿರಲಿಲ್ಲಾವೆ। ಶೇಷಶಯನಾನೆ ತಾನಿರನಾಗಾ। ಕಳತ್ರಬಿಟ್ಟ ಯನಡುವೆ। ಶಶಿಮುಖಿಯ ಬ್ಬಡವಿಯೊಳಿಡಬಹುದೆ ॥೪॥ ತಮಾ

ಮಾವತವ್ಮಾಅತ್ತೆ । ತಮ್ಮವ್ಳದುನರನ್ನಬಿಟ್ಟು । ತಾನುಪರರಶೇ ರಿಇರಬಹುದೆ । ಎಂದೆನುತಾಗ । ಮಾನವಪತಿಯಾರುಇಂತೆಂದುನುಡಿ ದಾರು ॥೫॥ ಮುನಿರಾಯನುಹೇಳಿದವಮಾತು । ಮೂರುವರುಷಕೆನಿ ನ್ನಾರಮಣಾ । ಶೇರುವಾನೊನಿನ್ನಬಳಿಗೆಂದು । ತಿಳಿದುವರಿಂಲಿನಾರಿ ಜೀವತಾಳಿಇರ್ದಾಳೂ ॥೬॥ ಸ್ವನಾಗತಿಯಿಂದಾಅವಳು । ಜೀವಾಹಿಡಿ ಯಾದೇಅಳಿದರೆ । ಅಪಾಪವೂಯಾರಿಗೆಎನುತಾಲಿ । ಅದರವಿವರಾವ ನಾರೀಯಾರುಹೇಳೂತಿದಾ್ರೂ ॥೭॥ ತಾಯಿಗೆಕೆಲವುಎಂದು । ತಂ ದೆಗೆಕೆಲವುಎಂದು । ರಾಯಾಪುಷ್ಕರಗೆಕೆಲಾವು । ಮಾಯಾದಿಂದಲಿ ಜೂಜನಾಡಿಸಿದಾತಾಗೆಕೆಲವೂ ॥೮॥ ಇಂತುಪುರದಾಜನರೂಎಲ್ಲಾ ಸ್ವಂತಾದಿಂದಮಾತಾನಾಡಿ । ಅಂತರಂಗಾದಿಕೇಳಿನಳರಾಜಾಭೂನಾ ಥನಾಬಳಿಗೆ । ಚಿಂತೆಯಿಂದಲಿಬಂದುಶೇರಿದಾ ॥೯॥

ವ ॥ ಇಂತು ನಳರಾಜನು ಪೋಗಿಭೀಮರಾಯನಿಗೆ ಕರವಂಮ್ಮಾ ಗಿಮುಕ್ಕೈಕಟ್ಟಿ ನಿಂತಿರಲು ಭೀಮರಾಯನು ರತ್ನಪೀಠವಂಹಾಕಿಸಿ ಪೀ ಠದಮ್ಯಾಲೆ ಮುಹೂರ್ತವಂ ಮಾಡೆನಲು ಬಾಹುಕನಿಂತೆಂದನೂ.

ಜಂಪೆ ॥ ನಿಮ್ಮಅಳಿಯನೆನಾನುನಿಮ್ಮಸರಿಧೊರೆಮಗನೆ । ನಿಮು ಬಾಂಧವನೊನೆನಿಗ್ಯಾಕೆಈಪೀಠ॥೧॥ಭೃತ್ಯಮಾತ್ರನುನಾನುಸ್ಯಾಧೊ ರೆಗಳುನೀಲು । ಮತ್ತೆನಬ್ಬನಸ್ಯಾವೆಮಾಡುವನುನಾನೂ ॥೨॥ ಪುಣ್ಯಾ ಹೀನನಿಗೆಈಬಣ್ಣದಾಸಿಗೆಯಾಕೆ । ಹುಣ್ಣಿಮೆಯಚಂದ್ರಮನಂತಿ ರುವದೊರೆಗಲ್ಲದೆ ॥೩॥ ಬಿಡದಿಯೊಳುನಮ್ಮಧೊರೆವಬ್ಬನೆತಾನಿರುವ । ಬಡಮನೆಸನಿಂದಲಿಬಹುಚಿಂತೆಯಿಂದಾ ॥೪॥ ಕಲ್ಯಾಣವಾಗುವರೆ ಎಂಬವಾರ್ತೆಯಕೇಳಿ । ಇಲ್ಲಿಗೆತಾಂಬಂದಸಂತೋಷದಿಂದಾನೀಲು ಈಗಲುನೆನ್ನಕರಶಿದಾವಿವರಗಳು । ಮಾಜದೆಹೇಳಿನನ್ನಕಳುಹಿಕೊಡಿ ಎಂದಾ ॥೬॥ ಅನಿತರೊಳ್ದಮಯಂತಿಮನದಿಸಂಶಯದಿಂದ । ವನಿ ತೆಬಂದವನರೂಪುನೋಡಿದಳೂ ॥೭॥ ನೋಡಿಅತಿದುಃಖದೊಳುಕಂ ಬನಿಯಕರೆಯುತಿರೆ । ಅದುಕಂಡುನಳರಾಜಇಂತೆಂದನಾಗಾ॥೮॥ ಕ ನ್ಯಾಕೆಕರಸಿದಿರಿನೀಲುಇಲ್ಲಿಗೆ । ಈಗ । ನನ್ನಕಂಡವಳುದುಃಕಿಸುತಿ ಹಳುಯಾಕೆ ॥೯॥ ಎಂದುಮುಖವನ್ನುನೋಡಿನಳರಾಜನಿಂತೆಂದ। ಇ

ನ್ಯಾಕೆಚಿಂತಿಸುವೆವ್ರೋಚಂದ್ರವದನೆ ॥೧೦॥ಕರುಣದಿನಿಮ್ಮತಂದೆವರ
ಡನೆಯುಕಲ್ಯಾಣ। ಭರದಿಂದಮಾಡುವನುಕರಸಿಧೊರೆಗಳನು ॥ ಧ
ಳಿಗೆಬಂದಿತುನಾಳೆಕಲ್ಯಾಣವದಗುತಿದೆ। ಇಳೆಯೊಳಗೆನಿಮ್ಮತಂದೆಕ
ರಶಿವದೊರೆಗಳನು ॥೧೨॥ ಎಂದಮಾತುತಾಕೇಳಿ ಇಂದೀವರಾಕ್ಷಿಯು।
ಕಂದಿಮನದೊಳುಕುಂದಿದುಃಖದೊಳುಮುಳಿಗಿ ॥೧೩॥ ಮತ್ತೇಹೇಳಿ
ದನೆಳನುಚಿತ್ತದೊಲ್ಲಭೆಗಾಗ। ನಿನ್ನಮನೆಕೆಸರಿಬಂದಪನಮದುವೆ
ಯನುವಾಳ್ಪ ॥೧೪॥ ಅರಣ್ಯದೊಳುನಿನ್ನಇರಿಸಿಪ್ರೋದಂತೆಪನ। ನಾ
ರಿನೀಕೇಳವಂಗೆವಿಂಚಾದಧೊರೆಗಳನು ॥೧೫॥ ಕರಸಿಮದುವೆಗಳಾ
ಗಿಅಧಿಕರತಿಯೊಳಗವನ। ಎನೆರುವೆಟ್ಟದಹಾಗೆ ಇರಬಹುದುನೀ
ನು ॥೧೬॥ ಇಂತುಕೌತುಕದಮಾತಾಡುತಿರೆನಳರಾಜ। ನಂತರಂಗ
ವತಿಳಿದುಭೀಮತಾನಾಗ ॥ ೧೭ ॥ ಈತನೆನಳರಾಜನೆಂದುಚಿಂತೆಯ
ತಾಳಿ। ಆಗಮಕ್ಕಳತಂದುಹತ್ತರಕೆಕಳುಹಿ ॥೧೮॥ ನಳರಾಜನಾಕ್ಷೈ
ಯ್ಯಾಪಿಸಿದುಕುಳ್ಳಿರಿಸಿಮತ್ತೆ। ಬಳಿಕತೊಡೆಗಳಮ್ಯಾಲೆಮಕ್ಕಳನು
ಇರಿಸಿ ॥೧೯॥ ಜನನಾಥತನ್ನಸುತರಅಕ್ಷಣವೆತಾಕರಸಿ। ಘಳಿಲನೆಬಾ
ಗಿಲೊಳುತಾನುಬಿಗಿಮಾಡಿ ॥೨೦॥ ಮಕ್ಕಳನುತಕ್ಕೈಸಿದುಃಖಿಸುತದ
ಮಯಂತಿ। ಕಕ್ಕಸದಕಾಂತಗಿಂತೆಂದಳಾದೇವಿ ॥೨೧॥

ವಚನ ॥ ಇಂತು ದಮಯಂತಿ ತನ್ನಕಾಂತನ ಮುಖವಂನೋಡಿ
ಅನೇಕದುಃಖದಿಂದ ಪಿನೆನ್ನುತಿರ್ದಾಳೂ.

ಸಾಂಗತ್ಯಾ ॥ ಭೂನಾಥಕೇಳ್ನಾನುಬುದ್ಧಿಹೀನೆಗಳಿಂ। ದನೀವ್ರೊ
ಬರುವದಕ್ಕೆಈಯತ್ನಎನಲೂ ॥೧॥ ಮಾಡಿಕರಸಿದೆಎನ್ನಯತಪ್ಪುನೀ
ಮನ್ನಿಸಿ। ಎನ್ನರಕ್ಷಿಸಬೇಕೆನಲೂ ॥೨॥ ಎಂದಮಾತನುಕೇಳಿಚಲದ
ದಿಂದಲಿತಾನು। ಮಂದಗಮನೆಗೆಇಂತೆಂದಾ ॥೩॥ ಪುರುಷಾಗೆಕಷ್ಟ
ಬರುವದುನೀಕಂಡು। ಸರಿಯಾರಮುಂದೆನಿಂದಿಸಿದೆ ॥೪॥ ಸರಿಧೊರೆ
ಗಳಮುಂದೆದೂರುಮಾಡಿಸಿನೀನು। ಅರಿಯದಂತಿರುವಾದುಸರಿಯೆ॥
ನಡತೆಅಲ್ಲವುಮತ್ತೆತರವಲ್ಲನಿನಿಗಿದು। ಸರಸೀಜಮುಖಿಯೆ ಕೇಳೆನೆ
ನಲೂ ॥೫॥ ಧರಧರದಲ್ಲಿಧೊರಗಳುಬರುತಲಿರ್ಪರು। ಸರಿಬಂದಧೊರೆ
ಯನೋಡು ॥ ೬ ॥ ಕರವಪಿಡಿದುಕಲ್ಯಾಣವನುನೀನಾಗಿ। ಇರದೆಇ

ನ್ಯಾಕೆದುಃಖಿಸುವೆ ॥೮॥ ನಳರಾಜನಿಲ್ಲದಿದ್ದರೆಮತ್ತೆಇಲ್ಲವೆ। ನನಿ
ಗೆತನಿಗೆಎಂದುತಾವು ॥ ೯ ॥ ಮನೆಬಂದನೊಬ್ಬಾನ ಮತ್ತೆಮದುವೆ
ಯಾಗಿ। ಘನಸುಖಪಡದೆದುಃಖಿಪರೆ ॥೧೦॥ ಅಡವಿಯೊಳ್ನಿನ್ನಬಿಟ್ಟು
ಪೋದಾತನು। ಮಡದಿನಿನಗೆಪಗೆಯವನು ॥೧೧॥ ಅವನನಿಂದಿಸು
ವಮನ್ನಾಂಯವಲ್ಲವುಕೇಳು। ಕಮಲಾಯತಾಕ್ಷಿಯೆನೀನೂ ॥೧೨॥ ಈ
ಗಅನುಕೂಲವಾಮಾಡಿಬೇಗದೊಳಿರೆ। ತಾಕಾಡೆಎನಗೆದೋಷಗಳು ॥
ಭೀಮರಾಯನುಎನ್ನನಳನೂಎಂದೆನ್ನುವ। ಕೋಪಾಲಿಎನ್ನವಲಿಸು
ವರೆ ॥೧೪॥ ಈವೀರಸೇನನುಇರ್ದರೆನೀನುವರಿವೇಯ। ಭಾವೆಕೇಳ್ನ
ಳನಲ್ಲನಾನು ॥೧೫॥ ಅಡವಿಯೊಳುಕಣ್ಣಾಹಂಬಲುಮೆದ್ದು। ಪೋ
ಗುತ್ತಿರಲೂಆಗನಿನ್ನಾ ॥೧೬॥ ನಿಮ್ಮತಂದೆಯಬಳಿಗೆನಿನ್ನಾಪೋಗೆ
ನ್ನಾಲು। ನಂಬೀಸಿಪೋಗಾದೆಇರಲೂ ॥೧೭॥ ಹಂಬಾಲುಮಾಡಿನ್ನ
ಬಿಟ್ಟುಪೋದಾತಗೆ। ಕುಂಭಿಣೀಪಾತಕಂಬಹುದೊ ॥೧೮॥ ಈಗನಿ
ನಿಗೆಕಲ್ಯಾಣವೆಂಬುದಕೇಳ್ನೀ। ಬರುವಾರನಾಚಿಕೆಇಲ್ಲ ॥೧೯॥ ಆತನಿ
ದ್ದಂತೆಬಬ್ಬನತಂದುನೀನೀಗ। ಭೂತಳದೊಳುಮದುವೆಯಾಗಿ ॥
ಪ್ರೀತಿಯಿಂದಿರದೆಈರೀತಿದುಃಖಿಸುವಾರೆ। ಬಂದನಾನಿಷ್ಟುಮಾತುಗ
ಳಾ ॥೨೧॥ ಆಡಿದೆನಾನುನಳರಾಜನಲ್ಲಾವು। ನೋಡಿನೀನ್ಯಾಕೆದುಃ
ಖಿಸುವೆ ॥೨೨॥ ಎಂದಮಾತನುಕೇಳಿದಮಯಂತಿತಾನಾಗ। ಮೊದ
ಲುಶೀಳಿದಶೀರಶೆರಗಾ ॥ ೨೩ ॥ ಅಂದುತನ್ನಯಶೀರ ಶರಗುಜೋಡಿಸಿ
ನೋಡಿ। ಒಂದಾಗಿಇರಚಂದ್ರವದನೆ ॥೨೪॥ ಕಂದಿತಾನಾಕ್ಷಣಕಡು
ದುಃಖದಿಂದಲಿ। ಚಂದ್ರವದನೆಮೂರ್ಛೆಪೋಗಿ ॥೨೫॥

ವ ॥ ಇಂತು ಆ ದಮಯಂತಿಯು ಈತ ನಳರಾಜನೆಂದು ತಿಳಿದು ಅನೇಕದುಃಖದಿಂದ ಪ್ರಲಾಪಿಸಿಕೊಂಡು ಏನೆನ್ನುತಿರ್ದಾಳೂ.

ದ್ವಿಪದೆ ॥ ರೂಪಿನಲಿಮನ್ಮಥನೆಈರೂಪುನಿನಗೆ। ಪ್ರಾಪ್ತಿಆಯಿ
ತೆಈಪಾಪಿಕಲಿಯಿಂದ। ನಿನ್ನಯರೂಪುಗಳುನಿನ್ನಲಾವಣ್ಯಾ। ನಿನ್ನ
ಪ್ರತಾಪಗಳುನಿನ್ನಸಂಪದವು। ನಿನ್ನರಾಜ್ಯೋಪಭೋಗನಿನ್ನಸಾಮ್ರಾ
ಜ್ಯ। ಎಲ್ಲಿಹೋಯಿತುನಿನ್ನಚೆಲ್ವಪ್ರತಾಪ ॥ ಎಂದೊಶೋಕದೊ
ಳುಅಇಂದೀವರಾಕ್ಷಿ। ಕಂದಿಕಳವಳಿಸುತಿರೆಮತ್ತೆನಳರಾಜ। ತನ್ನರಾ

ಣಿಯದುಃಖ ತಾನೋಡಿಬೇಗ । ವುನ್ನತಶೋಕದೊಳು ವುರ್ವೀಶತಾ
ನು । ಅಳುತಿರೆ ಅದನೋಡಿ ಆದಮಯಂತಿ । ತಾಯಿತಂದೆಗಳಧೃತಿ
ಗುಂದಿಶೋಕಿಸಲು । ಮತ್ತೆಕೆಳದಿಯರು ಅಳುತಿರಲು ಶೋಕದಲಿ । ಅ
ನಿತರೊಳು ನಳರಾಜನಾಗ । ತನ್ನದುಃಖವನಿಲಿಸಿತಾನು ಇಂತೆಂದಾ ।
ಶನಿಮಾಯಗಳು ನಮಗೆ ಅರಣ್ಯದೊಳು ಬಿಡಲು । ವನಿತೆಭೂಪತಿಗಳ
ಬಳಿಯೊಳಗೆತಾನಿರಲು । ಆಡಬಾರದಮಾತಆಡಿಸಬಹುದೆ । ನೋಡಿ
ದವರಿಗೆನಾನು ಬಹುಹೀನನಲ್ಲವೆ । ಎಂದಮಾತನುಕೇಳಿ ಇಂದೀವರಾ
ಕ್ಷಿ । ಕಂದರ್ಪನೊಳು ಪೇಳ್ದವಾಕಾಂತೆತಾನಾಗ । ನೀವುರುತುಪರ್ಣ
ನಾಶೇವೆಗಳುಮಾಳ್ಪ । ಭಾವವೆಲ್ಲವುನನಿಗೆರುಷಿಗಳುಪೇಳೆ । ಅದನರಿ
ತುನಾನಿಮ್ಮನುಕರೆಸಪೇಳಿ । ಬರಲೆಂದು ಆವಾರ್ತೆಕಲ್ಪಣೆಯಮಾಡಿ ।
ಎರಡನೆಯಕಲ್ಯಾಣವೆಂದುನಾನೀಗ । ಕರೆಸಿದೆನೆಹೊರತುಬೇರೆಮಾತಿ
ಲ್ಲ । ಮನದೊಳಗೆಬೇರೊಂದುಮರ್ಮವಾದರೆಯು । ಅವನಿಜಲವಹ್ನಿ
ಪವನನಭದಿವಾಕರನುಸೋಮತಾರೆಗಳು । ಶಿವನುಹರಿಯುಅಜರುಗಳು
ದೇವತೆಗಳೆಲ್ಲಾ । ನರಸಾಕ್ಷಿಯನೆನ್ನೊಳಗೆಅನ್ಯಾಯವಿರಲು । ಬ್ರಾಹ್ಮ
ಣನಕೊಂದಂತೆಪಾಪಗಳುಬರಲಿ । ಪತಿಗೆವಂಚನೆಮಾಳ್ಪಸತಿಗಳಪಾ
ಪ । ಅತಿಶಯದಿಬರಲೆಂದುಎನಗೆಈಕ್ಷಣಕೆ । ಸ್ತ್ರೀಹತ್ಯೆಶಿಶುಹತ್ಯೆಗೋ
ಹತ್ಯೆವೆಲ್ಲ । ಬರಲೆಂದುತಾನುಪ್ರತಿಜ್ಞೆಯಮಾಡಿ । ಪಾವಕನಸ್ತು
ತಿಸಿಅತಿಶಯದಿತಂದೆಯೊಳುಇಂತೆಂದಳಾಗಾ ॥

ವ॥ ಇಂತು ದಮಯಂತಿಯು ತಮ್ಮ ತಂದೆಗೆ ಅಗ್ನಿಕೊಂಡವಂ
ಮಾಡಿಸೆಂದು ಪೇಳಲು ಭೀಮರಾಯನು ಕೊಂಡವಂಮಾಡಿಸುವ ವಿ
ಸ್ತಾರವಂ ಪೇಳ್ವೆನದೆಂತೆನೆ. ಅಟತಾಳ-ಅರ್ಧರೇಖು ॥ ಭೀಮರಾ
ಯನುತಾನುಪ್ರೇಮದಿಂದಾಗ ॥೧॥ ಮಂತ್ರಿಮಾನ್ಯರೊಳೀವಾ
ರ್ತೆಯಪೇಳಿ ॥೨॥ ಚಂದಾದಿಂದಿರುವಂತಾಸ್ಥಳವನೋಡಿದಾರು ॥
ಸಾಕ್ಷಿಯಕಲ್ಲನುಜೋಕೆಯಿಂನಿಲಿಸಿ ॥೪॥ ಮಡಿವಾಳತಟ್ಟಿಕೆಯ ಎಡ
ಬಲದೊಳಿರಿಸೀ ॥೫॥ ಎಣ್ಣೆತುಪ್ಪದಗಡಿಗೆತಂದುಇರಿಸಿದಾರು ॥೬॥
ಕೊಂಡಾವತೆಗಸಿದಪಂಡೆಯತನದೀ ॥೭॥ ಗಂಧಾದಕೊರಡುಗಳುಪ
ಟ್ಟಿಸಿದಾನು ॥೮॥ ಕದಳೀಯಕಂಬಗಳಮುಂದಿಂದನಿಲಿಸಿ ॥೯॥ ಪು

ಶ್ರೀನತೋರಣವನುತ್ತುಕಟ್ಟಿಸಿದಾ ॥೧೦॥ ಹೊಂಬಾಳೆಪುಷ್ಪವತೆಂಬು ರಚಿಸಿದಾರು ॥೧೧॥ ಧೊರೆಗಾಳುಗೊಡೆಗಳುಭರದಿಂದೆತ್ತರಿಸೆ ॥ ೧೩ ॥ ಸನ್ನಾಹವಮಾಡಿಕೊಂಡುಕೊಂಡಾದೊಳಾಗಾ ॥೧೪॥ ಅನಲಾನಸ್ತುತಿಸಲುಹತ್ತಿತಾಕ್ಷಣವೇ। ಪುರಿಪಾಳುತಿರ್ದುದುಧರಣಿಯುಸಭಕೆ ॥೧೫॥ ಆಗದಮಯಂತಿಯುಬೇಗದಿಂಬಂದು ॥೧೬॥ ರಮಣಾನಪಾದಕ್ಕೆ ಚೆನ್ನಾಗಿಮಣಿದು ॥೧೭॥ ಘನಭಕ್ತಿಯಿಂದಾಲಿಕರಗಳಾಮುಗಿದು ॥ ಸಾಕ್ಷಿಕಲ್ಲಿನಮ್ಯಾಲಿಜೋಕೆಯಿಂನಿಂತೂ ॥೧೯॥ ಲೋಕರಕ್ಷಕನಾದಅಗ್ನಿದೇವರಿಗೆ ॥೨೦॥ ಚಂದಿರವದನೆಪ್ರತಿಜ್ಞೆಯಂಮಾಡಿ ॥೨೧॥

ವಚನ ॥ ದಮಯಂತಿ ಮತ್ತಿಂತೆಂದಳೂ.

ಏಕತಾಳ ॥ ಪೋಷಾವಕೋತ್ತಮಾಪೋದಯಾಸಾಂದ್ರನೇ। ನೀಕೇಳುಕರುಣಾದಿನನ್ನಾವಾಕ್ಯಗಳು ॥೧॥ ಶ್ರೀಪತಿಸಾಕ್ಷಿಯಾಗಿಪನ್ನಪಶಿಗೆ। ನಾನುಪಾಷಾನೆನೆದರಈಕ್ಷಣಾನೀನೂ ॥೨॥ ಪಿಡಿದುಯಜ್ಞೇಶನನ್ನಕೆಡಹಿಬುಡಿಯಮಾಡು । ದೃಡವಿದೆಎನ್ನೊಳುಕೆಡಹಾಯಿಸೆಂದು ॥೩॥ ಇಂತುಅಗ್ನಿಯಬೇಡಿದಂತಿಗಮನೇಅಗೆ। ಸ್ವಂತಾದಸಾಕ್ಷಿಕಲ್ಲಿನಮ್ಯಾಲೆನಿಂತೂ ॥ ೪ ॥ ಹರಿಯಜಸುರರಿಗೆಕರವಮುಗಿದೂಅಗ। ಹರುಷಾದಿಅಷ್ಟದಿಕ್ಪಾಲಕರಿಗೆರಗಿ ॥೫॥ ಭರದಿಂದತಾನೆಗದುಆಪುರಿಯೊಳುಬೀಳೆ। ಕರುಣಾದೊಳಿಗ್ನೇಶಕರಗೀದನಾಗಾ ॥೬॥ ಪುರಿಹೋಗಿತೆಣ್ಣಗಾಗಿಶಿರಿಮುಡಿಬಾಡದೆ। ಸರಸಿಜಮುಖಿಇರಸುರರೆಲ್ಲಮೆಚ್ಚಿ ॥೭॥ ದೇವದುಂದುಭಿಶಬ್ದರೀಪಿಯಿಂದಾಗಲು। ಹುಪ್ಪಿನಮಳಿಗಳುಭುವನಾಪಿಂಸುರಿಯೆ ॥೮॥ ಆಪ್ಯಾಳಿಯೊಳುಹರಿಯುಪ್ರೇಮದಿಂದಲಿತಾನು। ಪಕ್ಷಿರಾಜನಮೇಲೆಅಕ್ಷಣವೆಕುಳಿತೂ ॥೯॥ ಕರದೊಳುಶಂಖುಚಕ್ರಭರದಿಂದತಾಪಿಡಿದು। ಭರದೊಳುಶ್ರೀದೇವಿ ಹರುಷದಿಂದಾ ॥೧೦॥ ಮಕರಕುಂಡಲಗಳುಮೇಲಾದಭುಜಕೀರ್ತಿ। ಜ್ವಾಲೆಕಿರೀಟಗಳುಲೀಲೆಯಿಂಧರಿಸಿ ॥೧೧॥ ಇಂತುಆಭರಣವಸ್ವಂತದಿಂದಲಿಧರಿಸಿ। ಚಂದದಿಂದಲಿಬಂದಪನ್ನಗಾಶಯನಾ ॥೧೨॥ ಇಂದ್ರಾದಿದೇವರುತುಂಬುರನಾರದರು। ರಂಭೆಯೂರ್ವಶಿಯಾರುಶಂಭ್ರಮದಿಂದ ॥ ಇಂತುಸಕಲಸುರರುಮೇಳದಿಂದಲಿಲಕ್ಷ್ಮೀ। ಕಾಂತಕರುಣಾದಿಬಂದು

ಭಕ್ತಾನಬಳಿಗೆ ॥೧೪॥ ನಾರದಾವಸಿಷ್ಠಾರುಸನಕಾಸನಂದಾರು। ವಾ
ಲ್ಮೀಕಿಭರದ್ವಾಜರೆಲ್ಲಾರುಬಂದೂ ॥೧೫॥ ಗರುಡನವ್ಹಾಲೇರಿಹರು
ಷದಿಂದಲಿಹರಿಯು । ಹರುಷದಿಂದಬಂದುಪ್ರತ್ಯಕ್ಷವಾಗೆ ॥೧೬॥

ವ ॥ ಇಂತು ನಳರಾಜನು ಶ್ರೀಹರಿಯಂ ಕಂಡು ಸಾಷ್ಟಾಂಗವೆ
ರಗಿ ಅತಿಭಕ್ತಿಯಿಂದ ಸ್ತುತಿಸುತಿರ್ದನದೆಂತೆನೆ.

ರಾಗ-ನಾಟಿ ॥ ಶರಣುಶ್ರೀವೈಕುಂಠನಾಯಕ । ಶರಣುಶ್ರೀಪುರು
ಷೋತ್ತಮ । ಶರಣುಶ್ರೀವೈಕುಂಠನಾಯಕ । ಶರಣುಲೋಕಾರಕ್ಷ
ಕಾ । ಶರಣುಶರಣೂ ॥೧॥ ಜಲಜನೇತ್ರಮುಕುಂದಮಾಧವ । ಶಂಕು
ಚಕ್ರಗದಾಧರ । ಜಲಜಶಯನಉಪೇಂದ್ರ ಅಚ್ಯುತ । ಶೈಲಧರನಾ
ರಾಯಣಾ ॥ ಶರಣುಶರಣೂಪರಮಪದಗೋವಿಂದಮಾಧವ । ಪದ್ಮ
ನಾಭಜನಾರ್ದನಾ । ಧರಣಿಧರಕರಿವದನವಾಹನ । ದೈತ್ಯಹರಿಬಲಿ
ಬಂಧನಾ । ಶರಣುಶರಣು ॥ ಆದಿದೇವಮುನೀಂದ್ರವಂದಿತ । ಅಖಿಲ
ಸುರಗಣಸೇವಿತಾ । ವೇದವೇದವಿರಿಂಚಿಸನ್ನುತ । ವೆಂಕಟೇಶನಮೋ
ನಮೋ । ಶರಣುಶರಣೂ ॥ ನರರುಸುರರನುಪೊರೆದುರಕ್ಷಿಪ । ಕರು
ಣವುಳ್ಳಂತದೇವನೆ । ಹರುಷದಲಿಸರ್ಪನೊಳುಶಯನಿಪ । ಮುರಹ
ರೀನಾರಾಯಣಾ ॥೫॥ ವ ॥ ಇಂತೆಂದು ಹರಿಯನ್ನು ಸ್ತುತಿಮಾ
ಡಿ ಮತ್ತೇನೆಂದು ಸ್ತುತಿಸುತಿರ್ದನದೆಂತೆನೆ.

ದ್ವಿಪದೆ ॥ ಜಯಪುಂಡರೀಕಾಕ್ಷಜಯದೈತ್ಯಶಿಕ್ಷಾ । ಜಯರಕ್ಷ
ಮಂದಾರಜಯಕರುಣಾಹಾರ । ಜಯಸುರವಿನುತಾಂಗಜಯಪಾಪ
ಭಂಗ । ಜಯವೇದಸಂಚಾರಜಯಕೀರ್ತಿಹಾರ ॥ ಜಯಸುಗು
ಣೋರಜಯಶ್ರೀನಿವಾಸ । ಮುನಿಗಣದಲಿಸುರರಲ್ಲಿಘನಗಿರಿಗಳಲ್ಲಿ ।
ಶೃಂಗಾರವನಗಳಲಿಸಕಲವೇದದಲಿ । ಕಮಲಜನಲ್ಲಿಯುಕಮಲಮಿ
ತ್ರನಲಿ ॥ ಕಮಲಾರಿಯೊಳುಸಕಲಸುಮನಸರ ॥ ಬಳಿಯುಸಕಲಪ್ರ
ಪಂಚದೊಳಗಿರುವಶ್ರೀಹರಿಯು । ಇಂದುನಾಮಾಡಿದಪುಣ್ಯದಿನೀ
ಪ್ರತ್ಯಕ್ಷವಾಗಲುಧನ್ಯನಾದೆ । ಮಾಧವನೆನಿಮ್ಮಶ್ರೀಪಾದಸೇವೆಗಳು ॥
ಈದಿವಸದೊರಕಿತುನಾಪುಣ್ಯನಾದೆ । ಎಂದುಸ್ತುತಿಮಾಳ್ಪಭಕ್ತನ
ಮಾತಕೇಳಿ । ಆಂದುಸಂತೋಷದಿಂತೆಂದಶ್ರೀಹರಿಯುಾ ॥

ವಚನ ॥ ಇಂತುಸ್ತುತಿಸುವನಳರಾಯನಂ ಕಂಡುಅತಿಹರುಷದಿಂ ದಶ್ರೀಹರಿಇಂತೆಂದನು. ಜಂಪೆ ॥ ಮಾನವಾಧೀಶನಿನ್ನ ಮರ್ಮವ ರಿಯೆನಾನಹಿತನು । ಭಾನುನಂದನನಿಷ್ಟುಬಾಧೆಪಡಿಸಿದಾನು ॥೧॥ ನರ ನಾಥಘೋರಅರಣ್ಯದೊಳಗೆನೀರ್ವರುಬಳಲಿದಿರಿ । ಬಹುಕಷ್ಟದಿಂದನೀವೀ ಗ ॥೨॥ ದಮಯಂತಿತಾನುಪತಿವ್ರತೆಸತ್ಯವುಳ್ಳವಳು । ಕ್ರಮದಿಂ ದಕಾಣೆಲೋಕದೊಳಗಿಂತಾ ॥೩॥ ಗುಣಶೀಲೆಇಂತಾಪುಣ್ಯಾಂಗನೆ ಯನೀನು । ಅನಲನೊಳುಕೆಡಹುವರೆದೃಢವಂತೆಯನ್ನು ॥೪॥ ಈಚಂ ದ್ರಮುಖಿಯಮನವನುನೀನುತಿಳಿಯದಾದೆ । ಕ್ರೋಧದಿಂದಿಷ್ಟುಮಾ ತುಗಕೇಳಾಡಬಹುದೆ ॥ ಭುಜಗರಾಜನುಕೊಟ್ಟವಸ್ತ್ರವನುನೀನೀಗನಿ ಜವಾಗಿಧರಿಸಿನಿನ್ನರೂಪುಭರವಶದಿ ॥೬॥ ದಮಯಂತಿದೇವಿಗೆಕ್ರಮ ದಿಂದನೀತೋರಿಜನುಮಾನವಿಲ್ಲದೆಪುಷ್ಕರನಗೆಲಿಮೊ ॥ ೭ ॥ ನಿನ್ನರಾ ಜ್ಯವನೀನುಸನ್ನುತದಿಪಾಲಿಸುತ ॥ ಸುಖದಿಂದಯಿರುಎಂದುವರವಿ ತ್ತುಹರಿಯು ॥೮॥ ಹರಿತಾನುವರವೀಯೆಅತಿಹರುಷದಿಂದಾಗ । ಧ ರಣೀಶಮತ್ತೊಂದುಬೇಡಿಕೊಳುತಿರ್ದ ॥

ವ ॥ ಇಂತೆಂದು ಹೇಳಿದಶ್ರೀಹರಿಯೊಡನೆ ನಳರಾಜನುಪ್ರತಿಬಿ ನ್ನಪವಂಮಾಡುತಿರ್ದನಂತೆಂದನೆ. ಯಕತಾಳ ॥ ಹರಿಯೆನಿಂಮ ಪಾದಪದ್ಮದರ್ಶನವೆರಯುದೊರಕಿತುಅದರಿಂದಧನ್ಯನಾನಾದೆ॥೧॥ ಇಷ್ಟುದಿವಸನಾನುರಾಜ್ಯವನ್ನಾಳಿದೆ ।ಎನಗಿನ್ನುಸಾಕುನಿಮ್ಮಕೂಡಿ ನ್ನುಬರುವೆ ॥೨॥ ನಮ್ಮನೆಕರಕೊಂಡುವೈಕುಂಠಪುರದೊಳುನಿಮ್ಮ ಪಾದದಸೇವೆಯೊಳಗಿರಿಸಬೇಕು ॥೩॥ ಎಂದೆನುಡಿದವಮಾತಿಗೆಶ್ರೀಹ ರಿಮೆಚ್ಚಿ । ಚಂದದಿಂಭಕ್ತಿಗೆಇಂತೆಂದನಾಗ ॥೪॥ ನರನಾಥಚಂದ್ರ ನೀನರಲೋಕವೆಲ್ಲವು । ಹರುಷದಿಂದಾಳೆಂದುಹೇಳಿವರವಿತ್ತಾ ॥ ೫ ॥ ಹೇಳಿದಹರಿತಾನುನಳರಾಜಕೇಳೆಂದುಇಳೆಯನೆಲ್ಲವುಕೆಲದಿವಸನೀನಾ ಳೂ ॥೬॥ ಆಬಳಿಕನಿನಿಗಿನ್ನುಭರದಿಂದವೈಕುಂಠ । ಪದವಿಕೊಡುವೆ ನೆಂದುಹರಿತಾನುಹೇಳಿ ॥೭॥ ನಳರಾಜನನುಕರೆದುನಿನ್ನರೂಪುಗಳೆವಾ ಗೆ । ನಮ್ಮತದಿಂದಲಿತೋರಬೇಕೇನಲೂ ॥೮॥ ಹರಿಯುವಾಕ್ಯವಕೇಳಿ ಹರುಷದಿಂದಾಲಿ ನಳನುವುರಗರಾಜಾನು ಕೊಟ್ಟಾವಸ್ತ್ರಾವಧರಿಸೆ ॥

ಎಂದಿನಂದೀರೂಪುಚಂದದಿಂದಾಗಲು । ದುಂದುಭಿಮೊಳಗಿತುದೇವ ಲೋಕದಾಲಿ ॥೧೦॥ ಅವನೀಯುಮ್ಯಾಲಿನ್ನು ಹುವ್ವಿನಮಳೆಗರಿಯೆಶಿವ ನಸಖನುತಾನುಸಂತೋಷಪಡಲೂ ॥ ೧೧ ॥ ಕ್ಷೀರಸಾಗರಪುತ್ರಿಶೃಂ ಗಾರಗಾತ್ರೆಯು । ಸಾರಸದಳನೇತ್ರೆಸಾವಜಗಾತ್ರೀ ॥೧೨॥ ಸಕಲ ಜಗನ್ಮಾತೆಮುಕ್ತಿಯನೀವದಾತೆ।ಮಕರಕೇತನಮಾತೆಇಭರಾಜಪ್ರೀ ತೆ ॥ ೧೩ ॥ ಭೀಮರಾಯನಸುತೆಯುಪ್ರೇಮದಿಂಮುದ್ದಾಡಿ । ಕೋ ಮಲಾಂಗಿಯುಹರಿಪುರಾಣಿಇಂತೆಂದಳೂ ॥೧೪॥ ನಿನ್ನಂತೆಪತಿವ್ರತೆನಿ ನ್ನಂತಸತ್ಯವಂತೆಇನ್ನಿಲ್ಲಲೋಕದೊಳೆಂದಾಳಾದೇವಿ ॥೧೫॥ ಇನ್ನು ಬಹುಕಾಲವುನಿನ್ನ ರಮಣಾನುನೀನೂಸಮ್ಮತಿಯಿಂದಾಸಕಲರಾಜ್ಯ ವನಾಳೀ ॥೧೬॥ ಆಮ್ಯಾಲೆನಿಮಗಿನ್ನು ಸ್ವರ್ಗಭೋಗಾವುಬರಲಿ । ಕಾ ಮಾಹಿತನಕರುಣದಿಂದಾನಿಮಗೆ ॥೧೭॥ ಎಂದುವರಪಿತ್ತುಇಂದಿರೆದೇ ವಿಯು । ಆನಂದದಿಂದಹರಿಯುಸಹವಾಗಿರಲೂ ॥೧೮॥

ವ ॥ ಇಂತು ಶ್ರೀಹರಿಯು ನಳರಾಜನಿಗು ದಮಯಂತಿಗುಸಹ ವಾಗಿ ಸ್ಥಿರದಿಂದಬಾಳೆಂದು ಅರಿಕೆಯುನಿತ್ತು ಸಕಲಸುರರು ಸಂ ಮ್ಯಾಳದಿಂದಗರುಡವಾಹನ ರೂಢನಾಗಿ ವೈಕುಂಠಕ್ಕೆಬಿಜಯಂಗೈ ಯ್ಯಲುಅತರುವಾಯದಲ್ಲಿ ನಳರಾಜನುಹರುಷದಿಂದಿರಲು ಆನಿತ ರೊಳುವಸಿಷ್ಟಮುನಿಶ್ವರನು ಬಂದನದೆಂತೆನೆ.

ರಾಗ ॥ ನನ್ನನಾನಾನಾನಾ । ಕಾವಿಧೋತ್ರವುಟ್ಟುಕೊಂಡುಕಮಂ ಡಲವಧರಿಸಿಕೊಂಡು । ಠೀವಿಯಿಂದವಸಿಷ್ಟಮುನಿಬಂದನಾಗಾ ॥೧॥ ತಲೆಯೊಳುಜಡೆಮುಡಿಯು ಬಲವಾದಕಾಮಾಕ್ಷಿಯುಧರಿಸಿಕೊಂಡು ವಸಿಷ್ಟನುಹರುಷದಿಂದಾ ॥೨॥ ದಂಡಕಮಂಡಲವುದರ್ಭೆಯುಕೈಲಿಹಿ ಡಿದುಮಂಡಲಕಧಿಕವಾದವಸಿಷ್ಟರುಷಿಯುಬಂದಾ ॥

ವ॥ ಇಂತುಬಿಜಯಂಗೈದವಸಿಷ್ಟಮುನೀಶ್ವರಗೆ ಸಾಷ್ಟಾಂಗವೆರ ಗಿನಳರಾಜನುಸ್ತುತಿಯಂಮಾಡುತಿರ್ದನದೆಂತೆನೆ

ದ್ವಿಪದೆ ॥ ಶರಣ್ಯೆಯುಸ್ವಾಮಿವಸಿಷ್ಟರೆನಿಮಗೆ । ಶರಣಯ್ಯದೇವ ಮುನಿಯೆನಿಮ್ಮಯಕರುಣ । ಗುರುನಿಮ್ಮಯಚರಣಕಮಲಗಳ್ಯಾ ವೆದೊರಕಿತುಎನಗಿನ್ನುಎನ್ನ ಯಭವಭಯವು । ಹರಿದುಪೋಯಿತು

ನಾನುಪಾವನನಾದೆನ್ನೆಂದ್ಯಾ. ವ ॥ ಇಂತುಸ್ತುತಿಯೆಂಮಾಡಿದ ನಳರಾಜನಿಗೆ ವಸಿಷ್ಟಮುನಿಇಂತೆಂದನು.

ಕಂ ॥ ಜನನಾಥನಿನ್ನಸತ್ಯಕೆ । ಘನದಿಂದಲಿಹರಿಯುಮೆಚ್ಚಿತಾ ದಯಮಾಡಿದ । ಇನಕುಲದಎನ್ನಕೀರ್ತಿಯು । ದಿನಕರಪ್ರಭೆಯಂ ತೆಇನ್ನುಬೆಳಗುತಲಿದಿಕೋ. ವ ॥ ಇಂತುರುಷೀಶ್ವರನು ಶಿಕ್ಷೆಯನಂಪೊಗಳುತ್ತಿರಲು ಅನಿತರೊಳುರುತುಪರ್ಣನುನಳರಾಜನದರುಶನಕ್ಕೆಬಂದನದೆಂತೆನೆ. ಸಾಂಗತ್ಯಾ ॥ ರುತುಪರ್ಣತಾನಾಗ । ಅತಿಹರುಷ ದಿಂದಾಲಿಬಂದುಇಂತೆಂದಾ ॥೧॥ ದೇವನೇನಿಮ್ಮರಯಮಾಡಾವತಿ ಳಿಯಾದೆ । ಕ್ಯಾವೆಮಾಡಿಸಿಕೊಂಡೆನು ॥೨॥ ಕಾರ್ಯುದ್ಧಈತಪ್ಪುಮನ್ನಿಸಿಎನ್ನಈಗಾಲು । ರಕ್ಷಿಸಬೇಕುಕರುಣದಲಿ ॥೩॥ ನಿಮ್ಮಿಂದಎನಗೀಗ ಪನ್ನಗಾಶಯನಾನ । ವುನ್ನತದರುಶಾನವಾಯ್ತು । ಧನ್ಯಾನಾನಾದೆನುಇನ್ನೂಕೊರತೆಮರತುಮನ್ನೀಶಿರಕ್ಷಿಸುನೀನೂ ॥ ೪ ॥ ಎನ್ನಲಾ ಮಾತಿಗೆಪನ್ನಾಗಶಯನಾನ । ವುನ್ನತಭಕ್ತನಿಂತೆದಾ ॥೬॥ ಧರಣೀಶಶನಿಮಾಯದಿಂದಾ ನಿನ್ನಯಬಳಿಯಲಿರುತಿರನರನಾಗ್ದೆ॥೭॥ ಮನದೊಳುಸಂದೇಹಪಡಬ್ಯಾಡನೀನೆಂದು । ವಿನಯಾದಿಂದಾತನ ಮನ್ನಿಸಿ ॥೮॥ ಭೀಮರಾಯನಬಳಿಗೆಪ್ರೇಮದಿಂದಾಬಂದು । ಕಾಮಸನ್ನಿಭನುಇಂತೆಂದಾನಮ್ಮಪುರಕೆನಾನುಪೋಗಬೇಕನುತಾ । ಸುಮ್ಮಾನದಿಂಮಾವಗೆಪೇಳೆ ॥೯॥ ಮಂದಿಮಾರ್ಬಲವುತೆಳತಂತ್ರಸಹವಾಗಿ । ಚಂದಾದಿಸೂರ್ಯಪ್ರಭೆಯಂತೆ ॥೧೧॥ ಅಂದಾದಿಂಪೊಳೆವಂ ತರಥವೇರಿ । ತಾನಾಗಕುಶಲದಿಂಪುಷ್ಕರನಂಕಂಡೂ ॥೧೨॥

ವ ॥ ಇಂತುನಳರಾಜನುಪುಷ್ಕಳನಕಂಡು ಶನಿಮಾಯದಿಂದನಿನ್ನೊಡನೆಜೂಜಮನಾಡಿ ನನ್ನರಾಜ್ಯವನೆಲ್ಲನಿನಿಗೆ ಸೋತನಲ್ಲವೆಪುನಹಾ ಪಗಡೆಯಂನಾಡುವಬಾರೆಂದು ನಳರಾಜನು ಪು--ಕ್ಕರನಕೇಳಲು ಪುಷ್ಕರನಿಂತೆಂದನು. ಕಂ ॥ ಆಡಲ್ಕೆಕೊಡದೀಗಲು ।ರೂಢಿಯೊಳ್‌ಶನಿರಾಜನಪ್ಪಣೆಇಲ್ಲದೆ । ಆಡುವದಿಲ್ಲವುಎನ್ನಲು । ಆಡಿದಪ್ರತಿಮುತ್ತರಗಳನಳರಾಜೇಂದ್ರನು ॥೧॥ ಎನ್ನೊಡನೆಜೂಜನಾಡದೆ । ಇರ್ದಡೆನಾಬಿಡುವದಿಲ್ಲಅದುಅಲ್ಲದಡೆ । ಮಾಡುಎನ್ನೊಳುಯುದ್ಧವ । ರೊ

ಧೀಶ್ವರನುಮ್ಮನೀಗಪ್ರೋದರಬಿಡುವೆನೆ ॥೨॥ ಕೇಳುಪುಷ್ಕರನುಆಗಲಾ ಚಂದದಿನಳರಾಜನೊಡನೆಪಗಡೆಗೆನಿಲ್ಲಲು । ಕಂದರ್ಪರೂಪನಾಡ ಲುಚಂದದಿಪುಷ್ಕರನುತನ್ನರಾಜ್ಯವಸೋತನು॥೩॥ ಸೋತುತಾನಾಗ ಪುಷ್ಕರ । ಧಾತುಗಳಂಕುಂದಿಸಕಲಚಿಂತೆಯೊಳಗಾಗಲು ।ಭೀತಿಯು ತನ್ನೊಳಗಿಲ್ಲದೆ । ಭೂತಳವಂಬಿಟ್ಟುಕೊಟ್ಟಪ್ರತಿಪುಷ್ಕರನು ॥೪॥

ವ ॥ ಇಂತು ಪುಷ್ಕರರಾಯನು ಮತ್ತೆ ಪಗಡೆಯನ್ನಾಡಿ ನಳರಾಜಚಂದ್ರನಿಗೆ ತನ್ನ ರಾಜ್ಯವೆಲ್ಲವಂ ಸೋತುಕೊಡಲು ಪುಷ್ಕರನಂ ನೋಡಿ ನಳರಾಜನು ಏನೆನ್ನುತ್ತಿರ್ದಾನೂ.

ಕಾಂಬೋಧಿ ಜಂಪೆ॥ಪುಷ್ಕರನೆಕೇಳೋನೀನೀಗಾ । ಪೇಳ್ವೆನಿಷ್ಕರದಮಾತುನಾನೀಗಾ ॥೧॥ ಶನಿರಾಜನಾಬಲ್ಮೆಯಿಂದಾ। ನೀನೆನಗೆಬಹುಕಷ್ಟ ಪಿಕ್ಕಿಸಿದೆಚಂದಾ ॥೨॥ ರಾಜ್ಯಭೂಮಿಯನುತಕೊಂಡು । ನೀನುಪೂಜ್ಯಗೆಡಿಸಿದೆಬೇಗಬಂದು ॥೩॥ ಮೂರುದಿನಅನ್ನನೀರಿಲ್ಲದೆಶೇರಿಸಿದೆಅರಣ್ಯದೊಳಗೆ ॥೪॥ ಪಟ್ಟಣದಜನರುನನ್ನಬಳಿಗೆ । ನೀನುಬಾರದಂತೆ ಕಟ್ಟುಮಾಡಿಸಿದೆ ॥೫॥ ಇಂತುಬಾಧೆಯಪಡಿಸಿನೀನು । ನಾನುನಿನಗೆಮಾಡಿದತಪ್ಪುಯೇನು ॥೬॥ ಪೂರ್ವಾರ್ಜಿತದಫಲವುಇರಲು । ಅದನುಪಿಹಾರುವರುಯಾರುನೀಕೇಳೂ ॥೭॥ ಮುನ್ನಮಾಡಿದಕರ್ಮಫಲವುಇರಲು । ಅದನುಪಿಹಾರುವರುಯಾರುನೀಕೇಳೂ ॥೮॥ ನೀನೇನ್ನ ಮಾಡುವೆಇನ್ನೂ । ಪಣೆಯೊಳಗೆತಾನುಅಜಬರೆದಬರಹವನೂ ॥೯॥ ಎಂದುಪುಷ್ಕರನಸತ್ಕರಿಸಿ । ಅವಗೆಚಂದದಿಂವುಡುಗರೆಯತರಿಸೀ ॥ ಮಾಡಿದನು ವುಡುಗರೆಯತಾನು । ಅವಗೆನಡಗರದಿ ಸಕಲಭಾಗ್ಯವನೂ ॥೧೧॥ಕೊಟ್ಟುಪುಷ್ಕರಗೆನಳರಾಜಾ । ಅವನಧಿಟ್ಟದಿಂಕಳುಹಿದನು ಬೇಗಾ ॥೧೨॥ ತಾಳಮ್ಯಾಳವುಅರ್ಥಿಯಿಂದಾ । ತಾನುಕರಿತುರಗಕಾಲಾಳಿನಿಂದಾ ॥೧೩॥

ವ ॥ ಇಂತಪ್ಪರೀತಿಯಿಂದ ಪುಷ್ಕರನಂಕಳುಹಿಸಿ ಮತ್ತೆ ವಸಿಷ್ಠ ಮುನೀಶ್ವರರು ದಮಯಂತಿಯಂ ಕರಸುವರೆ ವಿದರ್ಭಾಪುರಕ್ಕೆ ವಸುದೇವನಂ ಕಳುಹಿದರದೆಂತೆನೆ.

ಯಕತಾಳ ॥ ವಸುದೇವನೀನಿನ್ನು ಕುಶಲದಿಂದಲಿಪೋಗಿ । ವಸು

ಧೀಶಭೀಮರಾಯಗಿಲ್ಲಿ ॥೧॥ ನಡದಂತವಿವರವಸಡಗರದಿಂಪೇಳಿ। ದೃಢಚಿತ್ತೆಯಾದದಮಯಂತಿಕಂಡೂ ॥ ೨ ॥ ಆಕೆಯೊಳೀವಾರ್ತೆ ಜೋಕೆಯಿಂದರಿಪೇಳಿ। ಲೋಕಪಾಲನಸತಿಸುತರನ್ನ ಈಗ ॥೩॥ ಕರಕೊಂಡುಬರುವದೆಂದುವರಮುನಿಯುಕಳುಹಲು।ಬರದಿಂದವಸುದೇವಬಂದಾಪುರಕೆ ॥೪॥ ಭೀಮರಾಯನಕಂಡುಪೇಳಿದತಾವಾಗ ॥ ಕಾಮನನ್ನಿಭನಳನವೃತ್ತಾಂತವೆಲ್ಲ ॥೫॥ ಕೇಳಿಭೀಮನುಅಗಾಬಾಳಸಂತೋಷಾದಿ। ಆಳುಕುಮರಮಂದಿಅನೆಯುತರಸಿ।೬॥ತಾನುತನ್ನಯಸುತನುಇಬ್ಬರುರಥವೇರಿ । ಮಾನೂನಿದಮಯಂತಿಗಿತ್ತುಪಾಲಕೀಯ್ಯಾ ॥ ಮಿಸುನೀಯಪಲ್ಲಕ್ಕಿಯೊಳಗೆದಮಯಂತಿಯಾ। ಕುಸಲದಿಂದರಿತನ್ನಮಕ್ಕಳಸಹಿತಾ ॥೮॥ ಹೊರಟಾಳುತಂದೆಯಕೂಡೆಸಂತೋಷಾದಿ। ಭರದಿಂದಸಕಲವಾದ್ಯರೀಯಿಂದಾಗಾ ॥೯॥ ಇಂತುಭೀಮರಾಯನುಪಟ್ಟಣವಸೇರಿ । ದಂತಿಗಮನೆಸಹಿತ ಸ್ವಂತದಿಂದಾಗಾ ॥೧೦॥

ವ॥ ಇಂತು ಭೀಮರಾಯನು ನಿಷಧಪುರಕ್ಕೆಪೋಗುವ ಆನಿತರೊಳು ವಸಿಷ್ಟ ಮುನೀಶ್ವರರುಪಟ್ಟಣ ಶೃಂಗಾರವಂಗೈದರದೆಂತೆನೆ.

ಯಾಲಪದ॥ ಪಟ್ಟಾಣಾವುಶೃಂಗಾರಿಸಿ। ಪಟ್ಟೆಜಲ್ಲಿಮುತ್ತಿನಿಂದಾ ದಿಟ್ಟವನುಮಾಡೀರಚಿಸಿಪನು। ಆಪುರಾದಾಜನರೂ। ಶ್ರೇಷ್ಟಿಕಶಾನಾಳ್ವಪಟ್ಟಣವಾ ॥೧॥ ಕಸ್ತೂರಿಕುಂಕುಮಗಳನು ಕಲಸಿಗೋಡೆಗೆಪೂಸಿತಾವು ಚಿತ್ರಗಳನೊಬರದೊಎಲ್ಲಾರು। ಆಪುರದಾಜನರೂ ಮುತ್ತಿನರಂಗೋಲಿನಿಟ್ಟಾರೂ ॥೨॥ ಬೀದಿಯೊಳಗೆಕಸ್ತೂರಿಯಸಾರಿಸಿ। ಹರಡಿದಾರಾಗವಾಥವಭಕ್ತನಪಟ್ಟಣವ। ಆಪುರದಜನರೂ। ಚಂದದಿಂದಾಪುರವಾರಚಿಸಿದಾರು॥೩॥ಇಂತೂಪಟ್ಟಣವಶೃಂಗಾರಿಸಿ। ಕಂತೂಪಿತನಾಕರುಣಾದಿಂದ। ದಂತಿಗಮನೆಯುಸಹಿತಾ। ಕುಶಲಾದೀಕರತಂದುನಳನುಚಿಂತಿಯಿಲ್ಲಾದೆ। ಇರುತಾಲಿರ್ದಾನೊಐವತ್ತಾರುದೇಶಾದನೃಪರುಬೇರಬೇಕಎಲ್ಲಾರನ್ನು। ಸಾರಿಕರಿಸಿದಎಲ್ಲರನಾಕ್ಷಣಾವೇ। ಅವರೆಲ್ಲಾರುಬಂದು। ಸೇರಿದಾರುನಿಷಧಾಪುರವಾನು ॥೫॥ ಸುತ್ತಾಲಿದ್ದಾಧೊರೇಗಾಳುಬರೇ ಪೊತ್ತಾಕೂರ್ಮಾನುನಡುಗುತಿರಲೂ।

ಮತ್ತೆಗಜವೂತುರಗಾದಿಂದಾಲಿರಥಗಾಳೆಸಹಿತಾ । ಮೊತ್ತವಾಗೀ ಬಂದರೆಲ್ಲಾರು. ॥೮॥

ವಚನ ॥ ಇಂತು ಐವತ್ತಾರುದೇಶದ ಅರಸುಗಳುಬ್ರಾಹ್ಮಣರುಭಟ್ಟರುನಟ್ಟುವರು ಗಾಯಕರು ಸಕಲವಿದ್ಯದ ವಾಚಕರು ನಳರಾಜನಪಟ್ಟಾಭಿಷೇಕಕ್ಕೆ ಬರಲು ಪಟ್ಟಾಭಿಷೇಕದವಿಸ್ತಾರವಂ ಪೇಳ್ವೆನದೆಂತೆನೆ.

ಅಟತಾಳ-ಅರ್ಧರೇಖು ॥ ಕಳಶಾಕನ್ನಡಿಗಳಾನೆಳವಡಿಸಿದಾರು । ನವರತ್ನಖಚಿತಾದಮಂಟಪದೊಳಗೆ । ಭುವನಕಧಿಕವಾದಪೀಠಾವತರಿಸಿ । ಸಿಂಹಪೀಠಗಳನ್ನುಶೃಂಗಾರದಿಂದಾ । ಗಂಧಾಭಿಷೇಕವಅಂಗನೆಯುತೆರಲೂ । ಹಿತಮಂತ್ರಿಜನಪುರೋಹಿತರುತಾನಾಗ ॥ ಮಂಗಳಘಾತಕಮದ್ದಳೆಯಿಂನಾ । ಸಂಗೀತಸಾಹಿತ್ಯಘೋಷಣೆಯಿಂದಾಶೃಂಗಾರವುಳ್ಳಂಥಾಅಂಗನೆಯರಿಂದಾ । ವಾರನಾರಿಯುಜನರುಸಂಭ್ರಮದಿಂದಾ । ಭೇರಿನಗಾರಿಯುಶಬ್ದಾಗಳಿಂದಾ । ಭೋರೆಂದುಮೊರೆವಂಥಕಹಳೆಗಳಿಂದ । ಅರಿದಾದರತ್ನಸಿಂಹಾಸನದೊಳಾಗ । ನಳರಾಜನನುದಮುಯಂತಿಯುನಿಲಿಸಿ । ಕುಲಗುರುವಾದಂತಾವಸಿಷ್ಟರುಬಂದುಹೋಮಾದಿಕೃತ್ಯಗಳನೇಮದಿಂಮಾಡಿ । ಶಾಸ್ತ್ರಯುಕ್ತಗಳಿಂದಶಾಶೆಯುನಿಟ್ಟು । ಅಪರಂಜಿಯೊಳಗಿನ್ನುಪಟ್ಟೆಯುಮಾಡಿ । ಪಟ್ಟೆಯುತ್ತಕೊಂಡುವಸಿಷ್ಟರುಬಂದು ।ದೇವಲೋಕದಿದೇವದುಂದುಭಿಮೊಳಗೆ । ಅವ್ವಾಳೆಯೊಳುಸುರರುಪೂಮಳೆಗರ ಇಳೆಯೊಳಿರುವಜನರುಕಳಕಂದದಿರಲು । ಅವ್ವಾಳೆಯೊಳುಮುತ್ತೈದೆಯರಾ । ರತ್ನಾದಾರತಿಗಳಾ ನೆಳವಡಿಸಿತಂದು । ಎತ್ತುವವಿಸ್ತಾರಮತ್ತಿನ್ನು ಕೇಳಿ ॥

ವಚನ ॥ ಇಂತುಮುತ್ತೈದೆಯರು ರತ್ನದಾರತಿಗಳಂ ಪಿಡಿದುನಳರಾಜನಿಗುದಮಯಂತಿಗು ಸಹಮಂಗಳಾರತಿಗಳಂ ಎತ್ತುವರದೆಂತೆನೆ.

ಮಂಗಳಾರತಿಪದ॥ ಜಯಮಂಗಳಂನಿತ್ಯಶುಭಮಂಗಳಂ।ಜಯ ಜಯತುಹರಿಭಕ್ತನಳರಾಜಗೆ ॥ ಜ ॥

ಪಲ್ಲವಿ॥ ನಳರಾಜಚಂದ್ರನಿಗೆಕಳೆಯುಳ್ಳಪುರುಷನಿಗೆ । ಇಳೆಯನೆಲ್ಲವತಾನುಆಳುವವನಿಗೆ । ನಳಿನಮುಖಿದಮಯಂತಿರಮಣನೆಂಬನಿ

ಸುವಗೆ।ಏಳಿಪ್ಪಾಯದಸುಗುಣನಳರಾಜಗೆ ॥ಜ॥ಯ ಶನಿಮಾಯದಿಂ ದಲಿಧರಣಿಯಲ್ಲವಸೋತು । ಘನಕಷ್ಟಪಟ್ಟಂಥಜನನಾಥಗೆ । ಮತ್ತೆ ಶ್ರೀಹರಿಯಿಂದರಾಜ್ಯವಂನಾಳಿದ॥ ಮುನಿವಸಿಷ್ಟರಭಕ್ತನಳರಾಜಗೆ ॥ ಧಾರುಣಿಯನೆಲ್ಲವವಿಸ್ತಾರದಿಂದಾಳುವಗೆ। ಶೇರಿದವರನುಪೊರೆವನಳ ರಾಜಗೆ। ಅನ್ಯೆದುಬಂದುನಿಂದವರಸಲಹುವಧೊರೆಗೆ । ಮಾರಪಿತಭ ಕ್ತನಳರಾಜಗೆ ॥ಜ॥ ಲೋಕದಾಮನುಜರಿಗೆಸಾಕಾರವಂತನಿಗೆ। ಏಕ ಚಕ್ರದಿರಾಜ್ಯವಾಳುವವಗೆ। ಆಕಮಲನಾಭನಿಗೆಭಕ್ತನಾಗಿರುವಂಥ। ಶ್ರೀಕರಂಶಿಷ್ಯನಳರಾಜನೃಪಗೆ ॥ಜ॥ ಭೀಮರಾಯನಮಗಳಕಲ್ಯಾಣ ವಾದವಗೆ। ನೇಮನಿತ್ಯಗಳಿಂದ ಇರುತಿರ್ಪಗೆ। ಕಾಮಪಿತನಾದಶ್ರೀ ಹರಿಭಕ್ತಭೂಪತಿಗೆ ಕ್ಷೇಮದಾರತಿಬೆಳಗಿದರೆಲ್ಲರೂ ॥

ವಚನ ॥ ಇಂತುಮುತ್ತೈದೇರು ರತ್ನದಾರತಿಯಂನೆತ್ತಲುನಳ ರಾಜನು ಅತ್ಯಂತಸಂತೋಷದಿಂದ ವುಡುಗೆರೆಗಳು ತರಿಸಿಕೊಟ್ಟು ಮತ್ತೆಬಂದಿರುವಂಥಾ ಚತುರ್ದಿಕ್ಕು ಐವತ್ತಾರುದೇಶಾಧೀಶ್ವರರಾ ದಂಥಾದೊರೆಗಳೆಲ್ಲರಿಗೂ ಮೃಷ್ಟಾನ್ನಭೋಜನಂಗಳು ಮಾಡಿಸಿ ಗಂಧಪರಿಮಳಗಳಂಪೂಸಿ ತಾಂಬೂಲದಿಂದ ತೃಪ್ತಿಪಡಿಸಿ ಬ್ರಾಹ್ಮ ಣರಿಗೆಭೂರಿದಾನಗಳಂಮಾಡಿಸಿ ಸಂತೋಷದಿಂದ ಸಿಂಹಪೀಠದ ಮ್ಯಾಲೆಕುಳಿತುಕೊಂಡುಇರುವಸಮಯದಲ್ಲಿ ಭೀಮರಾಯನೇನೆನ್ನು ತಿರ್ದನು.

ಜಂಪೆ ॥ ಭೀಮರಾಯನುತಾಳಿಪ್ರೇಮದಿಂದಾಗ । ಕಾಮಪಿತಭ ಕ್ತನಿಗೆಸಾಷ್ಟಾಂಗವೆರಗಿ ॥೧॥ ಮತ್ತೆಮಾವಗೆತಾನುವಿನಯದಿಂದೆ ರಗಿದ । ಘನದಿಂದಬಾಳೆಂದುಶಿರವಪಿಡಿದೆತ್ತಿ ॥೨॥ ನಳಿನಮುಖಿದಮ ಯಂತಿಅಳಿಯನಿಗೆಬುದ್ಧಿಯನು । ತಿಳಿಯಪೇಳಿಯುತಾನುತೆರಳಿ ಸುತೆಸಹಿತಾ ॥೩॥ ಅನಿತರೊಳುನಳರಾಜಘನಗುರುವಸಿಷ್ಟರಿಗೆ। ವಿನ ಯದಿಂಸಾಷ್ಟಾಂಗವೆರಗಿದನು ॥೪॥ ಎರಗಿದಾತಾನನೋಡಿಮರುಗಿ ರುಷಿಹರುಷದೊಳು । ಕರಶಿರದಮ್ಯಾಲಿರಿಶಿಸ್ಥಿರಬಾಳೆಂದಾ ॥೫॥ಪ ರಿಕೆಯನುಕೊಟ್ಟಾಗಹರುಷಾದಿಂದಾಮುನಿಯು। ತೆರಳಿಪೋದಾನು ತನ್ನಆಶ್ರಮದಬಳಿಗೆ ॥೬॥ ಅನಿತರೊಳುನಳರಾಜದಮಯಂತಿಸಹ

ವಾಗಿ। ಘನವಾದರಾಜ್ಯವನುಆಳುತ್ತಲಿದ್ದಾ ॥೭॥ ಸಕಲಸಂಪತ್ತಿನೆಲಿಸುಖದಿಂದಇರುತಿರಲು । ಸಕಲಬಾಂಧವರೆಲ್ಲಶೇರಿದರುಆಗಾ ॥೮॥ ಎಂಬಗಾಥೆಯುತೆರದಿಮಂತ್ರಿಮಾನ್ಯರೆಲ್ಲಾ ಸಂಭ್ರಮದಿಬಂದಾರುಸಕಲಬಾಂಧವರೂ ॥

ವ ॥ ಇಂತುನಳರಾಜನ ಬಂದುಬಳಗವೆಲ್ಲವು ಬಂದು ನಳರಾಜನಂಕಾಣಿಸಿಕೊಂಡು ಏನೆನ್ನುತಿದ್ದಾರೂ.

ಯಕತಾಳ ॥ ಭೂನಾಥನೀವುಪೋಗಲುನಾವುಯಲ್ಲಾರು । ಸೂರ್ಯನಿಲ್ಲದಪದ್ಮದಂತೆಕಂದಿದೆವು ॥೧॥ ಧರ್ಮವರಿಯದೆಜನರುಮರ್ಮವತಿಳಿಯದವನ । ಇನ್ನುವಾಳ್ವೆಸಿದೊಖರ್ಮ್ಮಸಲದಿಂದ ॥೨॥ ಜನನಾಥಮೂರುದಿವಸನೀವುದಮಯಂತಿಯು । ವುಪವಾಸವಿರುತಿರನಾವದನೋಡಿ ॥೩॥ ಅನ್ನವತಂದುಕೊಡದೆಸುಮ್ಮಾನೆಇದ್ದೆವು । ಮನ್ನಿಸುಎಂದಾಗಮತ್ತೆಹೇಳಿದಾರು ॥೪॥ ನಿಮ್ಮಯಬಳಿಗೆನಾವುಬರಬೇಕುಯೆಂದರೆ। ನಮ್ಮಬರಲೀಸದೆಕಟ್ಟುಮಾಡಿಸಿದಾ ॥೫॥ ನಿಮಿಗೆಕಷ್ಟವುಬಂದವ್ಯಾಳ್ಯೆದೊಳ್ನಾವು। ನಿಮ್ಮಬಳಿಗೆಬಂದಿದ್ದರೆಅಡುಕರ್ಮಯಲ್ಲೆ ॥೬॥ ಎಂದವಮಾತಾನುಕೇಳಿನಳರಾಜನೆಂದನು । ಇಂದುನೀವೇನುಮಾಡುವಿರೆನ್ನಕರ್ಮ ॥೭॥ ಫಲಗಳುಹೀಗಿರೆನೀವೇನುಮಾಡುವಿರಿ । ವುಲ್ಲಾಸದಿಂದಕನಿಯುಪಿಡಿದುಈಮೇರೆ ॥೮॥ ಪೂರ್ವಾರ್ಜಿತದಫಲಮೀರುವರ್ಯಾರೆಂದು ।ಧರಣೀಶ್ವರಪುಷ್ಕರನೇನುಮಾಳ್ಪ ॥೯॥ ಬಲವಂತನಿರುವಲ್ಲಿಸ್ಮೈವಸೆಲೆಯಾಗಿಹುದು । ಬಲವಂತನಿಲ್ಲದಬಳಿಯಸ್ಮೈನತಾನಿಲ್ಲ ॥೧೦॥ ಕರುಣದಿಂದಲಿಈಗಕಮಲನಾಭನುಎನಗೆ ॥ ಕರುಣಿಸಿಕೊಟ್ಟಾನುಪುನಹಾಧರಣಿಯನೂ ॥೧೧॥ ಆಗನೀವಮಾಡಿದತಪ್ಪುಏತಿಗಲೆಹೋಯಿತು ಈಗಅವನೆಣಿಸಿದಾತನುಧೊರೆಯು ॥೧೨॥ ಎಂದುತನ್ನಬಳಗವನುಚಂದದಿಂದುಪಚರಿಸಿ ।ಇಂದುಶೇಖರನಭಕ್ತಇರುತಿದ್ದಾನ ॥

ವಚನ ॥ ಇಂತು ಬಂದಂಥಾ ಬಂಧುಬಳಗವನ್ನು ಉಪಚರಿಸಿ ನಳರಾಜನಿರುತ್ತಿರಲು ಅನಿತರೊಳು ಸಕಲರಾಷ್ಟ್ರದ ಧೊರೆಗಳೆಲ್ಲ ತಮ್ಮ ಮಂದವಸಾಬ್‌ನಲ ತಳತಂತ್ರಸಹಿತವಾಗಿ ಬಂದು ಕಪ್ಪಕೆ

ಗಾಣಿಕೆಯನ್ನಿಟ್ಟು ಸಾಷ್ಟಾಂಗದಂಡಪ್ರಣಾಮವಂ ಮಾಡಲು ನ
ಳರಾಜನು ಅವರನ್ನು ಮನ್ನಿಸಿ ಇಂತೆಂದನೂ.

ಅಟತಾಳ ಅರ್ಧರೇಖು ॥ ಧಾರುಣೀಧೊರೆಗಳಿರಾಎಲ್ಲಾರುಳಿಗಾ
ನಮ್ಮನೊಂಟಿಯೊಳಿರಿಸುವುಮ್ಮಾನಿರಬಹುದೆ ॥ ಎಲ್ಲಶೇರ್ದಿರಿಎಲ್ಲಾ
ರುನೀವು। ಎಂದುಈಮಾತುಹೇಳಲುನಳರಾಜ ॥ ಎಂದರಾಧೊರೆಗಳು
ಸಂದೇಹವಿಲ್ಲಾದೆ ॥ ಪುಷ್ಕರನಕೊಡೆನೀವುಪಗಡೆಯಾಡುವರೆ। ನಿ
ಮ್ಮಾನರಿಧೊರೆಯೊಳವನುಜೂಜಾಡುವರೆ। ಪುಷ್ಕರನನೀವಿಂತುಎ
ದುರಮಾಡುವರೆ। ಕಾರಲೀಸಾದವೂರತಗುಳಾನೀವು। ವಾರಿಯು
ಕರಕೊಂಡುಮತ್ತೆಬಾರೆಂದು। ಅವನಿರುವಹೀವಿಗಿನ್ನು। ಮಳೆಗಾಳಿ
ನ್ನಂತೆ। ಅವನಕಂಡರೆನಮಿಗೆಬಹುಕೋಪಬಹುದು।ಹೊಡೆದುಳಿಗ
ರಾವುತಕ್ಕೊಂಬೆವುರಾವ ನಿಮ್ಮನನೋಡಿಬಿಟ್ಟೋಸಮ್ಮತದಿಂದ।
ನೀವುಮನ್ನಿಸಿಅವಗೆರಾಜ್ಯವಕೊಡಲು। ನಾವುತಕ್ಕೊಂಡರೆಅಪಕೀ
ರ್ತಿಯೆಂದು। ನಿಮ್ಮನೋಡುವನಾವೂಮನ್ನಿಸಿಇದ್ದೊ॥

ವಚನ ॥ ಇಂತೆಂದು ರಾಷ್ಟ್ರಧೊರೆಗಳುಹೇಳಲುನಳರಾಜ ಇಂ
ತೆಂದನೂ.

ಕಂ ॥ ನನಿಗೆಕಷ್ಟವನುಪಡಿಸಿದ। ಮಾನವನಂಮುಂತೆಅವನಂ
ಸನ್ಮಾನಿಸಿದರೆ। ಭುವನದಲಿಕೀರ್ತಿಯುವನಿಗೆ। ಶಿವಶಖನುಕೊಡುವಪ
ದವಿಕೇಳಿರೆಧೊರೆಗಳೂ

ಕಂ ॥ ಯೆಂದುಮಾತಾಡುತಿರಲಾ। ಬಂದುಪ್ರಾಸ್ನೆಹಬೇಗಪಾ
ದಕೆಮಣಿದಿಯಲು। ಮುಂಧರೋದ್ಧರನಭಕ್ತನು। ಎಂದನುಅತನಿಗೆ
ತಾನುಧರ್ಮಪುರಾಣವ ॥

ಜಂಪೆ ॥ ಕೋಪದಲಿಪುಷ್ಕರನಕೊಡೆನಾವಾಡುತಿರೆ। ನಪಿಗೊಂ
ದುಮಾತು ಹೇಳದೆನೀನುಸಮ್ಮಾ ॥೨॥ ಕುವರರೀರ್ವರೆಕರದುಕೊಂ
ಡುಯೊಕ್ಷಣದಲ್ಲಿ। ತವುರುಮನೆಯೊಳಗೆಶೇರಿಸಯೆನಡದಾ॥೨॥ವರ್ತ
ಮಾನವಹೇಳಿಮತ್ತೆನೀಬಹು। ಚಿತ್ತದೊಳುಕರಗುತ್ತಕಳುಹಿದಳುನಿ
ನ್ನಾ ॥೩॥ ನೀವುಪಗಡೆಯನಾಡುತಿರುವಭಾವವನೋಡಿ ॥ ಬಾಲೆದ
ಮಯಂತಿಯುನೋಡಿಇಂತೆಂದಾ ॥೪॥ ಮಕ್ಕಳನುಕರಕೊಂಡುಚಿ

ಕ್ಕರದಲಿಪ್ರೋಗಿ । ಆಭೀಮರಾಯನಬಳಿಯೊಳಗೆಇರಿಸಿ ॥೫॥ ಇಲ್ಲಿ ನಡವವರ್ತಮಾನವೆಲ್ಲವನು ತಾಪೇಳಿನಿಲ್ಲದಿಲ್ಲಿಗೆನಾನುಬರುವನಿತರೊಳಗೆ ಭುವನವೆಲ್ಲವುಸೋತ್ತುಅವನೀಶಾತ್ತಾನೀಗ । ವನಿತೆಯನುವಡಗೊಂಡುಅರಣ್ಯಕೆಪ್ರೋದಾ ॥೭॥ ಎಂದಮಾತನುಕೇಳಿಕಂಬನಿಯಗರೆಯುತ್ತ । ಕುಂಭಿಣೀಪತಿಯುರುತುಪರ್ಣನಂಸೇರಿ ॥೮॥

ವಚನ ॥ ಇಂತೆಂದು ಪೇಳಿದಬ್ರಾಹ್ಮಣನಂಮನ್ನಿಸಿ ತನ್ನ ಬಳಿಯೊಳಿರಿಸಿಕೊಂಡು ಸಕಲರಾಷ್ಟ್ರದಧೊರೆಗಳಿಗೆ ಪುಡುಗರೆಗಳಿಂದ ತೃಪ್ತಿಪಡಿಸಿ ಅವರವರಪುರಂಗಳಿಗೆ ಕಳುಹಿಸಿ ನಳರಾಜನುದಮಯಂತಿಯು ಸಕಲ ಸಾಂಬ್ರಾಜ್ಯದಿಂದ ಏಕಚತ್ರವಂನಾಳುತಿರ್ದಾರೆಂದೆಂತೆನೆ.

ಕುರುಚುಜಂಪೆ ॥ ಧರೆಯೊಳೀಕೃತಿಕೇಳಿದವರ್ಗೆಹರಿಕೊಡುವ ಪವಿಯನುಇಷ್ಟಾರ್ಥವವಗೆ ॥೧॥ ಹರಿಕಥೆಯುಹರಿಧ್ಯಾನಪನ್ನು ಪೇಳ್ದರಿಗೆಹರಿಕೊಡುವಸಕಲಭಾಗ್ಯವನು ॥೨॥ ನಳರಾಜನಾಕಥೆಯು ಈಗನೀವು । ಇಳೆಯಪ್ರಭುಗಳುಕೇಳಿಬೇಗಾ ॥೩॥ ಇಳೆಯೊಳಗೆಜನರುಕೇಳಿದರೆಶನಿಯು । ತೊಲಗಿಪ್ರೋಪನುತನ್ನ ಸ್ಥಳಕೆ ॥೪॥ ಇಂತು ಕಥೆಯಕೇಳ್ದಂಗೆಪೇಳಿದವಗೆ ॥ ಹರಿಕೊಡುವಭಾಗ್ಯಗಳುನಿಮಿಗೆ ।

ದ್ವಿಪದೆ ॥ ಶ್ರೀಪಾರ್ವತೀಪತಿಗೆಶ್ರೀರಮ್ಯಾವತಿಗೆ । ಪಾಪವಿನಾಶನಿಗೆಪರಮಪುರುಷನಿಗೆ । ಕರಿಗೊರಳಭವನಿಗೆಕಕೋದ್ರಿರೀಶ್ವರಗೆ ॥ ವರಗಂಗಾಧರಸಖಗೆವಜ್ರನಾಭನಿಗೆ । ಶಂಖಚಕ್ರಾಂಕಿತಗೆಶರಣರಕ್ಷಕಗೆಪಂಕಜದಳಾಕ್ಷನಿಗೆ । ಪದ್ಮಜಾಂಡನಿಗೆ । ಶೇಷಾಚಲೇಶ್ವರಗೆ ಚಲುವವೆಂಕಟಗೆ । ಸಾಷ್ಟಾಂಗವೆರಗಿಸದ್ಭಕ್ತಿಯೊಳ್ಪೇಳ್ವ । ತಾನ್ಯಾರೆಯೆಂದೆನಲುಬುಧಜನರುಕೇಳಿ ॥ ಸೌಭಾಗ್ಯಸಕಲಗುಣಸಂಪನ್ನನಾದ । ಸುವಿವೇಕಿಕೆಂಪಣ್ಣನಾತನರ್ಧಾಂಗಿ । ಲಲನೆರತುನವೆಂಬತಿಮ್ಮವ್ವಾಂಬ । ಗರ್ಭಾಬ್ಧಿಸಲಿಚಂದ್ರನೆನಿಪನೆರೆಜಾಣಕೆಂಪಣ್ಣಕಥೆಯ । ಯಕ್ಷಗಾನವಮಾಡಿಅಧಿಕರೀಪಿಯೊಳು । ಸಕಲಕವಿಗಳಿಗೆಲ್ಲಸಾಷ್ಟಾಂಗವೆರಗಿ । ಕನ್ನಡದಿಪೇಳಿದಬಿನ್ನಾಣದಿಂದ । ಈಕಥೆಯತತತ್ಪೂರ್ವದೊಳಗೆಬೃಹದಾಸ್ಯಮುನಿಯು । ತಾಧರ್ಮರಾಯನಿಗೆಪೇ

ಲ್ಧಕಥೆಯು । ಮಧ್ಯದೊಳುಅಭ್ಯೋಲಿಈಕಥೆಯನ್ನು । ರಾಘವೈಯ್ಯ ನುಪೇಳ್ದ ದ್ವಿಪದಕಾವ್ಯದೊಳು । ಅವರಿಗೆಸಾಷ್ಟಾಂಗವೆರಗಿಸಾಸ್ತುತಿಸಿ । ಈಗ ನಾಪೇಳಿದೆನು ಯಕ್ಷಗಾನದೊಳು । ಬರದವರಿಗೆಭಾಗ್ಯ ಅರ್ಥಿಸಿದವರಿಗೆ । ಐಶ್ವರ್ಯ ವೋದಿದಜನಕೆಸಕಲಸಂಪದವು । ನಳನ ಚರಿತ್ರೆಯು ಇಳೆಯೊಳಿಹಜನರು ಬಳಿಕ । ಬರದೋದಿ ಕೇಳಿದಜನರಿಗಿನ್ನು । ಶನಿತಾನುಅವರನು ಕಾರಲಂಜುವನು । ಧರಯೊಳಗೆನಳಚಕ್ರವರ್ತಿಕಥೆಯನ್ನು । ರವಿಶಶಿಯುಳ್ಳನಕ ಭೂಚಕ್ರದಲ್ಲಿ । ರಾಮಭಕ್ತನಾದಂತ ನಳರಾಜಚಂದ್ರನಕಥೆಯು । ಇಳೆಯೊಳೆಲ್ಲಆಚಂದ್ರತಾರಾರ್ಕವಾಗಿ ಒಪ್ಪುವದೊ ॥

ಕನ್ನಡ ಯಕ್ಷಗಾನ ನಳಚರಿತ್ರೆ

ಸಂಪೂರ್ಣವು.





ದುಶ್ಶಾಸನಕಥೆ—ಯಕ್ಷಗಾನಗ್ರಂಥ. ದುಶ್ಶಾಸನನು ದ್ರೌಪದಿಯ ಶೀರೆಯನ್ನು ಶೆಳೆಯುವದು; ದ್ರೌಪದಿಯು ಶ್ರೀಕೃಷ್ಣಮೂರ್ತಿಯನ್ನು ಧ್ಯಾನಮಾಡಲು ಶೀರೆಯು ಅಕ್ಷಯವಾಗುವದು; ಭೀಮನು ರಣರಂಗದಲ್ಲಿ ದುಶ್ಶಾಸನನ್ನು ಕೊಂದು ದ್ರೌಪತಿಯ ಪ್ರತಿಜ್ಞೆಯನ್ನು ನೆರವೇರಿಸುವದು; ಇವೆಲ್ಲಾ ವಿಸ್ತಾರವಾಗಿ ಬರದಿಧೆ. ಗ್ರಾಮಗಳಲ್ಲ ಆಟಕಟ್ಟುವದಕ್ಕೂ, ಓದುವದಕ್ಕೆ ಸ್ವಾರಸ್ಯವಾಗಿಯೂ, ಇಧೆ. ಇದುವರಿಗೂ ಇದ್ದ ದುಶ್ಶಾಸನಕಥೆಗಳಲ್ಲಿದ್ದ ತಪ್ಪುಗಳನ್ನು ತಿದ್ದಿ ಈಗ ಹೊಸದಾಗಿ ಅಚ್ಚು ಹಾಕಿಧೆ. ಪ್ರತಿ ೧ ಕ್ಕೆ ೩ ಆಣೆ